ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯನ್ನು ಸಹ ಆ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ತನ್ನ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತನಾಗತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಗಳಿಗಾಗಿ,–

(ಎ) "ಕಂಪನಿ" ಎಂದರೆ ಯಾವುದೇ ನಿಗಮಿತ ನಿಕಾಯ ಮತ್ತು ಅದು ಒಂದು ಫರ್ಮನ್ನು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಫರ್ಮಿನ ಸಂಬಂಧದಲ್ಲಿ "ನಿರ್ದೇಶಕ" ಎಂದರೆ ಆ ಫರ್ಮಿನ ಒಬ್ಬ ಪಾಲುದಾರ.

**43. ಸಿವಿಲ್ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಗೆ ಪ್ರತಿಷೇಧ.–** (1) ಈ ಅಧಿನಿಯಮದ ಅಡಿಯಲ್ಲಿ ಒಬ್ಬ ಅಧಿಕಾರಿಯು ಅಥವಾ ಪ್ರಾಧಿಕಾರವು ಹೊರಡಿಸಿದ ಯಾವುದೇ ಆದೇಶವನ್ನು ಅಥವಾ ಕೈಗೊಂಡ ವ್ಯವಹರಣೆಯನ್ನು ಯಾವುದೇ ನ್ಯಾಯಾಲಯದಲ್ಲಿ, ಯಾವುದೇ ದಾವೆಯಲ್ಲಿ ಅಥವಾ ಅರ್ಜಿಯಲ್ಲಿ ಪ್ರಶ್ನಿಸತಕ್ಕದ್ದಲ್ಲ ಮತ್ತು ಈ ಅಧಿನಿಯಮದಿಂದ ಅಥವಾ ಅದರ ಅಡಿಯಲ್ಲಿ ಪ್ರದತ್ತವಾದ ಯಾವುದೇ ಅಧಿಕಾರಕ್ಕೆ ಅನುಸಾರವಾಗಿ ಅಂಥ ಅಧಿಕಾರಿಯು ಅಥವಾ ಪ್ರಾಧಿಕಾರವು ಕೈಗೊಂಡ ಅಥವಾ ಕೈಗೊಳ್ಳಲಿರುವ ಯಾವುದೇ ಕ್ರಮಕ್ಕೆ ಸಂಬಂಧಿಸಿದಂತೆ ಯಾವುದೇ ನ್ಯಾಯಾಲಯವು ಯಾವುದೇ ನಿರ್ಬಂಧಕಾಜ್ಞೆ ನೀಡತಕ್ಕದ್ದಲ್ಲ.

(2) ರಾಜ್ಯ ಸರ್ಕಾರದ ಪೂರ್ವಾನುಮೋದನೆಯನ್ನು ಪಡೆಯದೆ, ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಅಥವಾ ಮಾಡಲಾಗಿದೆಯೆಂದು ತಾತ್ಪರ್ಯವಾಗುವ ಯಾವುದೇ ಕಾರ್ಯಕ್ಕಾಗಿ ರಾಜ್ಯ ಸರ್ಕಾರದ ಯಾರೇ ಅಧಿಕಾರಿ ಅಥವಾ ನೌಕರನ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ವ್ಯವಹರಣೆಯನ್ನು ಹೂಡತಕ್ಕದ್ದಲ್ಲ.

(3) ರಾಜ್ಯ ಸರ್ಕಾರದ ಯಾರೇ ಅಧಿಕಾರಿ ಅಥವಾ ನೌಕರನು, ಈ ಅಧಿನಿಯಮದ ಮೂಲಕ ಅಥವಾ ಅಡಿಯಲ್ಲಿ ವಿಧಿಸಿದ ಕರ್ತವ್ಯಗಳನ್ನು ನಿರ್ವಹಿಸುವ ಅಥವಾ ಪ್ರಕಾರ್ಯಗಳನ್ನು ನೆರವೇರಿಸುವ ಕ್ರಮದಲ್ಲಿ ಸದ್ಭಾವನೆಯಿಂದ ಆ ಕಾರ್ಯವನ್ನು ಕೈಗೊಂಡಿದ್ದರೆ, ಅಂಥ ಯಾವುದೇ ಕಾರ್ಯದ ಸಂಬಂಧದಲ್ಲಿ ಯಾವುದೇ ಸಿವಿಲ್ ಅಥವಾ ಕ್ರಿಮಿನಲ್ ವ್ಯವಹರಣೆಯಲ್ಲಿ ಹೊಣೆಯಾಗತಕ್ಕದ್ದಲ್ಲ.

(4) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿದುದನ್ನುಳಿದು, ಯಾವುದೇ ಕಾರ್ಯದ ಬಗ್ಗೆ ದೂರು ನೀಡಿದ ದಿನಾಂಕದಿಂದ ಆರು ತಿಂಗಳೊಳಗೆ ದಾವೆಯನ್ನು ಹೂಡಿದ್ದ ಹೊರತು, ಕೈಗೊಂಡ ಆ ಯಾವುದೇ ಕಾರ್ಯದ ಸಂಬಂಧದಲ್ಲಿ ರಾಜ್ಯ ಸರ್ಕಾರದ ವಿರುದ್ಧ ಯಾವುದೇ ದಾವೆಯನ್ನು ಹೂಡತಕ್ಕದ್ದಲ್ಲ.

(5) ರಾಜ್ಯ ಸರ್ಕಾರದ ಯಾರೇ ಅಧಿಕಾರಿಯ ಅಥವಾ ನೌಕರನ ವಿರುದ್ಧ (1)ನೇ ಉಪ ಪ್ರಕರಣದ ಅಡಿಯಲ್ಲಿ ದಾವೆಯನ್ನು ಹೂಡುವ ಸಂದರ್ಭದಲ್ಲಿ, ದಾವೆ ಹೂಡಲು ಉದ್ದೇಶಿಸುವ ವ್ಯಕ್ತಿಯು, ಅಧಿಕಾರಿಗೆ ಅಥವಾ ಸಂದರ್ಭಾನುಸಾರ, ನೌಕರನಿಗೆ ವ್ಯಾಜ್ಯ ಕಾರಣದ ಸಾಕಷ್ಟು ವಿವರಗಳೊಂದಿಗೆ ಉದ್ದೇಶಿತ ದಾವೆಯ ಬಗ್ಗೆ ಕೊನೆ ಪಕ್ಷ ಒಂದು ತಿಂಗಳ ನೋಟೀಸನ್ನು ನೀಡಲು ಬದ್ಧನಾಗಿರತಕ್ಕದ್ದು. ಇದಕ್ಕೆ ತಪ್ಪಿದಲ್ಲಿ, ಅಂಥ ದಾವೆಯು ವಜಾ ಆಗತಕ್ಕದ್ದು.

**44. ಸಾಕ್ಷಿದಾರರನ್ನು ಸಮನು ಮಾಡುವ ಮತ್ತು ವಿಚಾರಣೆ ಮಾಡುವ ಅಧಿಕಾರ.–** ಯಾವುದೇ ವಿಚಾರಣೆ ನಡೆಸಲು ಈ ಅಧಿನಿಯಮದ ಅಡಿಯಲ್ಲಿ ಅಧಿಕಾರ ಪಡೆದ ಯಾರೇ ಅಧಿಕಾರಿಯು, ಸಾಕ್ಷಿದಾರರಿಗೆ ಸಮನು ನೀಡುವುದಕ್ಕೆ ಮತ್ತು ವಿಚಾರಣೆ ಮಾಡುವುದಕ್ಕೆ ಮತ್ತು ದಸ್ತಾವೇಜುಗಳನ್ನು ಹಾಜರುಪಡಿಸುವುದಕ್ಕೆ ಸಂಬಂಧಿಸಿದಂತೆ, ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ (1908ರ ಕೇಂದ್ರ ಅಧಿನಿಯಮ 5) ಅಡಿಯಲ್ಲಿ ಸಿವಿಲ್ ನ್ಯಾಯಾಲಯಕ್ಕೆ ಪ್ರದತ್ತವಾದಂಥ ಎಲ್ಲ ಅಧಿಕಾರಗಳನ್ನು ಚಲಾಯಿಸಬಹುದು ಮತ್ತು ಅಂಥ ಯಾವುದೇ ವಿಚಾರಣೆಯನ್ನು ಒಂದು ನ್ಯಾಯಿಕ ವ್ಯವಹರಣೆ ಎಂದು ಭಾವಿಸತಕ್ಕದ್ದು.

**45. ಪುನರೀಕ್ಷಣೆ.–** (1) ರಾಜ್ಯ ಸರ್ಕಾರವು, ಯಾವುದೇ ಸಮಯದಲ್ಲಿ ತಾನಾಗಿಯೇ ಅಥವಾ ಆಸಕ್ತನಾದ ಯಾರೇ ವ್ಯಕ್ತಿಯು ನಿರ್ದಿಷ್ಟಪಡಿಸಿದ ಅವಧಿಯೊಳಗೆ ಸಲ್ಲಿಸಿದ ಒಂದು ಅರ್ಜಿಯ ಮೇಲೆ, ಈ ಅಧಿನಿಯಮದ ಅಡಿಯಲ್ಲಿ ಯಾವುದೇ ಪ್ರಾಧಿಕಾರ ಅಥವಾ ಅದರ ಅಧೀನ ಅಧಿಕಾರಿಯು ಮಾಡಿದ ಯಾವುದೇ ನಿರ್ಣಯ ಅಥವಾ ಆದೇಶ ಅಥವಾ ವ್ಯವಹರಣೆಗಳಿಗೆ ಸಂಬಂಧಿಸಿದ ದಾಖಲೆಗಳನ್ನು, ಅಂಥ ನಿರ್ಣಯ ಅಥವಾ ಆದೇಶ ಅಥವಾ ವ್ಯವಹರಣೆಗಳ ಕಾನೂನುಬದ್ಧತೆ ಅಥವಾ ಔಚಿತ್ಯ ಅಥವಾ ಕ್ರಮಬದ್ಧತೆಯ ಬಗ್ಗೆ ಸ್ವತಃ ಮನದಟ್ಟು ಮಾಡಿಕೊಳ್ಳುವ ಉದ್ದೇಶಕ್ಕಾಗಿ ತರಿಸಿಕೊಳ್ಳಬಹುದು ಮತ್ತು ಪರೀಕ್ಷಿಸಬಹುದು ಮತ್ತು ಯಾವುದೇ ಸಂದರ್ಭದಲ್ಲಿ, ಅಂಥ ಯಾವುದೇ ನಿರ್ಣಯ, ಆದೇಶ ಅಥವಾ ವ್ಯವಹರಣೆಗಳನ್ನು ಮಾರ್ಪಾಟುಗೊಳಿಸಬೇಕೆಂದು, ರದ್ದುಗೊಳಿಸಬೇಕೆಂದು, ವಿಪರ್ಯಯಗೊಳಿಸಬೇಕೆಂದು ಅಥವಾ ಪುನರ್ ಪರಿಶೀಲನೆಗಾಗಿ ಹಿಂದಿರುಗಿಸಬೇಕೆಂದು ಅದಕ್ಕೆ ಕಂಡುಬಂದರೆ, ಅದು ತದನುಸಾರವಾಗಿ ಆದೇಶಗಳನ್ನು ಹೊರಡಿಸಬಹುದು:

ಪರಂತು, ಯಾರೇ ವ್ಯಕ್ತಿಗೆ ಮನವಿ ಸಲ್ಲಿಸಲು ಒಂದು ಅವಕಾಶ ನೀಡಿದ ಹೊರತು, ಈ ಉಪ ಪ್ರಕರಣದ ಅಡಿಯಲ್ಲಿ, ಅಂಥ ವ್ಯಕ್ತಿಗೆ ಪ್ರತಿಕೂಲ ಪರಿಣಾಮವನ್ನುಂಟು ಮಾಡುವ ಯಾವುವೇ ಆದೇಶಗಳನ್ನು ಹೊರಡಿಸತಕ್ಕದ್ದಲ್ಲ.

(2) ರಾಜ್ಯ ಸರ್ಕಾರವು, (1)ನೇ ಉಪಪ್ರಕರಣದ ಅಡಿಯಲ್ಲಿ ತನ್ನ ಅಧಿಕಾರಗಳ ಚಲಾವಣೆಯು, ಇತ್ಯರ್ಥದಲ್ಲಿರುವಾಗ ಅಂಥ ಯಾವುದೇ ನಿರ್ಣಯ, ಆದೇಶ ಅಥವಾ ವ್ಯವಹರಣೆಯ ಜಾರಿಯನ್ನು ತಡೆಹಿಡಿಯಬಹುದು.

**46. ನಿಯಮ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಪೂರ್ವ ಪ್ರಕಟಣೆಯ ತರುವಾಯ, ಈ ಅಧಿನಿಯಮದ ಎಲ್ಲ ಉದ್ದೇಶಗಳನ್ನು ಅಥವಾ ಯಾವುದೇ ಉದ್ದೇಶಗಳನ್ನು ಕಾರ್ಯಗತಗೊಳಿಸಲು ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ಒಂದು ನಿಯಮವನ್ನು ಪೂರ್ವಾನ್ವಯ ಪರಿಣಾಮ ಹೊಂದಿರುವಂತೆ ರಚಿಸಬಹುದು ಮತ್ತು ಅಂಥ ಒಂದು ನಿಯಮವನ್ನು ರಚಿಸಿದಾಗ, ಆ ನಿಯಮ ರಚನೆಯ ಬಗ್ಗೆ ಕಾರಣಗಳನ್ನು ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸುವ ಒಂದು ಹೇಳಿಕೆಯಲ್ಲಿ ನಿರ್ದಿಷ್ಟಪಡಿಸತಕ್ಕದ್ದು.

(3) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ನಿಕಟ ತರುವಾಯ, ರಾಜ್ಯ ವಿಧಾನ ಮಂಡಲವು ಅಧಿವೇಶನದಲ್ಲಿದ್ದರೆ ಅದರ ಪ್ರತಿಯೊಂದು ಸದನದ ಮುಂದೆ ಮತ್ತು ಅದು ಅಧಿವೇಶನದಲ್ಲಿಲ್ಲದಿದ್ದರೆ, ಅದರ ನಿಕಟ ತರುವಾಯದ ಒಂದು ಅಧಿವೇಶನದಲ್ಲಿ ಅಥವಾ ಒಂದಾದಮೇಲೊಂದರಂತೆ ಬರುವ ಎರಡು ಅಥವಾ ಹೆಚ್ಚು ಅಧಿವೇಶನಗಳಲ್ಲಿ ಅಡಕವಾಗಬಹುದಾದ ಮೂವತ್ತು ದಿನಗಳ ಒಟ್ಟು ಅವಧಿಯವರೆಗೆ ಇಡತಕ್ಕದ್ದು ಮತ್ತು ಅದನ್ನು ಹಾಗೆ ಇಡಲಾದ ಅಧಿವೇಶನದ ಅಥವಾ ನಿಕಟ ತರುವಾಯದ ಅಧಿವೇಶನದ ಮುಕ್ತಾಯಕ್ಕೆ ಮುಂಚೆ, ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಅಥವಾ ಆ ನಿಯಮವನ್ನು ರದ್ದುಗೊಳಿಸಬೇಕೆಂದು ಎರಡೂ ಸದನಗಳು ಒಪ್ಪಿದರೆ, ಆ ನಿಯಮವು ಆ ಮಾರ್ಪಾಟು ಅಥವಾ ರದ್ದಿಯಾತಿಯನ್ನು ಅಧಿಸೂಚಿಸಿದ ದಿನಾಂಕದಿಂದ, ಹಾಗೆ ಮಾರ್ಪಾಟು ಹೊಂದಿದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ, ರದ್ದಾಗತಕ್ಕದ್ದು ಆದರೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಲಾದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕ ಉಂಟುಮಾಡತಕ್ಕದ್ದಲ್ಲ.

(4) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಯಾವುದೇ ನಿಯಮವನ್ನು ಯಾರೇ ವ್ಯಕ್ತಿ ಉಲ್ಲಂಘಿಸಿದ್ದು, ಆ ಉಲ್ಲಂಘನೆಗಾಗಿ ಯಾವುದೇ ವಿಶೇಷ ದಂಡನೆಯನ್ನು ಉಪಬಂಧಿಸಿಲ್ಲದಿರುವಲ್ಲಿ, ಅವನು ಒಂದು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಐದು ನೂರು ರೂಪಾಯಿವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು:

ಪರಂತು, ಆಡಳಿತಗಾರನ ಪೂರ್ವಾನುಮೋದನೆಯಿಲ್ಲದೆ ಈ ಉಪಪ್ರಕರಣದ ಅಡಿಯಲ್ಲಿ ಯಾವುದೇ ಕಾನೂನು ವ್ಯವಹರಣೆಯನ್ನು ಹೂಡತಕ್ಕದ್ದಲ್ಲ.

**47. ವಿನಿಯಮಗಳು.–** ಪ್ರತಿಯೊಂದು ಪ್ರಾಧಿಕಾರವು, ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದು, ಈ ಅಧಿನಿಯಮದ ಅಡಿಯಲ್ಲಿ ತನ್ನ ಪ್ರಕಾರ್ಯಗಳನ್ನು ನಿರ್ವಹಿಸಲು ಸಾಧ್ಯವಾಗುವಂತೆ ಮಾಡಲು, ಈ ಅಧಿನಿಯಮಕ್ಕೆ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳಿಗೆ ಅಸಂಗತವಲ್ಲದ ವಿನಿಯಮಗಳನ್ನು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಪೂರ್ವ ಪ್ರಕಟಣೆಯ ತರುವಾಯ ರಚಿಸಬಹುದು.

**48. ರಾಜ್ಯ ಸರ್ಕಾರದಿಂದ ನಿರ್ದೇಶನಗಳು.–** ಪ್ರತಿಯೊಂದು ಪ್ರಾಧಿಕಾರವು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ, ರಾಜ್ಯ ಸರ್ಕಾರವು ತನಗೆ ನೀಡಬಹುದಾದಂಥ ನಿರ್ದೇಶನಗಳು ಮತ್ತು ಸೂಚನೆಗಳಿಂದ ಮಾರ್ಗದರ್ಶನ ಪಡೆಯತಕ್ಕದ್ದು.

**49. ಅಧಿನಿಯಮವು ಇತರ ಕಾನೂನುಗಳ ಮೇಲೆ ಅಧ್ಯಾರೋಹಿ ಪರಿಣಾಮ ಹೊಂದಿರುವುದು.–** (1) ಈ ಅಧಿನಿಯಮದ ಮತ್ತು ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಉಪಬಂಧಗಳು, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಅಥವಾ ನ್ಯಾಯಾಲಯದ ಅಥವಾ ಇತರ ಪ್ರಾಧಿಕಾರದ ಯಾವುದೇ ರೂಢಿ, ಆಚರಣೆ ಅಥವಾ ಕರಾರು ಅಥವಾ ಡಿಕ್ರಿ ಅಥವಾ ಆದೇಶದಲ್ಲಿ ಅದರೊಂದಿಗೆ ಅಸಂಗತವಾದದ್ದೇನನ್ನೇ ಒಳಗೊಂಡಿದ್ದರೂ, ಪರಿಣಾಮ ಹೊಂದಿರತಕ್ಕದ್ದು.

(2) ಸಂದೇಹಗಳ ನಿವಾರಣೆಗಾಗಿ, ಕರ್ನಾಟಕ ಭೂ ಸುಧಾರಣಾ ಅಧಿನಿಯಮ, 1961ರ ಮತ್ತು ಕರ್ನಾಟಕ ನೀರಾವರಿ ಅಧಿನಿಯಮ, 1965ರ ಮತ್ತು ಅವುಗಳ ಅಡಿಯಲ್ಲಿ ರಚಿಸಿದ ನಿಯಮಗಳ ಉಪಬಂಧಗಳು, ಈ ಅಧಿನಿಯಮದ ಉಪಬಂಧಗಳೊಂದಿಗೆ ಅಸಂಗತವಾಗಿಲ್ಲದಿರುವಷ್ಟರ ಮಟ್ಟಿಗೆ ಅನ್ವಯವಾಗತಕ್ಕದ್ದು ಎಂದು ಈ ಮೂಲಕ ಘೋಷಿಸಲಾಗಿದೆ.

**50. ತೊಂದರೆ ನಿವಾರಣಾಧಿಕಾರ.–** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ತೊಂದರೆಯನ್ನು ನಿವಾರಿಸುವ ಉದ್ದೇಶಕ್ಕಾಗಿ ತನಗೆ ಅವಶ್ಯವೆಂದು ಅಥವಾ ವಿಹಿತವೆಂದು ಕಂಡುಬರಬಹುದಾದಂಥ, ಈ ಅಧಿನಿಯಮದ ಉಪಬಂಧಗಳೊಂದಿಗೆ ಅಸಂಗತವಲ್ಲದಂಥ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಎರಡು ವರ್ಷಗಳ ಮುಕ್ತಾಯದ ತರುವಾಯ, ಈ ಪ್ರಕರಣದ ಅಡಿಯಲ್ಲಿ ಅಂಥ ಯಾವುದೇ ಅಧಿಸೂಚನೆಯನ್ನು ಹೊರಡಿಸತಕ್ಕದ್ದಲ್ಲ.

(2) ಈ ಪ್ರಕರಣದ ಅಡಿಯಲ್ಲಿ ಹೊರಡಿಸಿದ ಪ್ರತಿಯೊಂದು ಅಧಿಸೂಚನೆಯನ್ನು, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸತಕ್ಕದ್ದು, ಮತ್ತು 46ನೇ ಪ್ರಕರಣದ (2)ನೇ ಉಪ ಪ್ರಕರಣದ ಉಪಬಂಧಗಳು ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ನಿಯಮದ ಸಂಬಂಧದಲ್ಲಿ ಅನ್ವಯವಾಗತಕ್ಕದ್ದು.

**51. 1979ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 21ರ ನಿರಸನ.–** (1) ಕರ್ನಾಟಕ ನೀರು ಪೂರೈಕೆ ಪ್ರದೇಶಾಭಿವೃದ್ಧಿ (ಎರಡನೇ) ಅಧ್ಯಾದೇಶ, 1979ನ್ನು (1979ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 21) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸಿತವಾಗಿದ್ದರೂ, ಸದರಿ ಅಧ್ಯಾದೇಶದ ಅಡಿಯಲ್ಲಿ ಕೈಗೊಂಡ ಯಾವುದೇ ಕ್ರಮ ಅಥವಾ ಮಾಡಿದ ಯಾವುದೇ ನೇಮಕಾತಿ, ಹೊರಡಿಸಿದ ಅಧಿಸೂಚನೆ, ಆದೇಶ, ರೂಪಿಸಿದ ಯೋಜನೆ, ರಚಿಸಿದ ನಿಯಮ, ನಮೂನೆ ಅಥವಾ ಉಪವಿಧಿಯನ್ನು ಈ ಅಧಿನಿಯಮದ ಅಡಿಯಲ್ಲಿ ಕೈಗೊಳ್ಳಲಾಗಿದೆ, ರಚಿಸಲಾಗಿದೆ ಅಥವಾ ಹೊರಡಿಸಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಸದರಿ ಅಧ್ಯಾದೇಶಕ್ಕೆ ಅದರಲ್ಲಿ ಮಾಡಲಾದ ಯಾವುದೇ ಉಲ್ಲೇಖವನ್ನು ಈ ಅಧಿನಿಯಮಕ್ಕೆ ಮಾಡಲಾದ ಉಲ್ಲೇಖವೆಂದು ಭಾವಿಸತಕ್ಕದ್ದು ಮತ್ತು ಈ ಅಧಿನಿಯಮದ ಅಡಿಯಲ್ಲಿ ಕೈಗೊಂಡ ಯಾವುದೇ ಕ್ರಮದ ಅಥವಾ ಮಾಡಿದ ಅಥವಾ ಹೊರಡಿಸಲಾದ ನೇಮಕಾತಿ, ಅಧಿಸೂಚನೆ, ಆದೇಶ, ಯೋಜನೆ, ನಿಯಮ, ನಮೂನೆ ಅಥವಾ ಉಪವಿಧಿಯ ಮೂಲಕ ರದ್ದುಗೊಳಿಸಿದ ಹೊರತು ಮತ್ತು ರದ್ದುಗೊಳಿಸುವವರೆಗೆ ತದನುಸಾರವಾಗಿ ಜಾರಿಯಲ್ಲಿರುವುದು ಮುಂದುವರಿಯತಕ್ಕದ್ದು.

The above translation of the Karnataka Command Area Development Act, 1980 (Karnataka Act 6 of 1980) Shall be authoritative text in the Kannada Language under section 5A of the Karnataka Official Language Act. 1963 (Karnataka Act 26 of 1963)

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

P.R. 341

**ಜಿ.ಕೆ. ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ,

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 11 ರಾಶಾಪ್ರ 2007 ಬೆಂಗಳೂರು, ದಿನಾಂಕ:28ನೇ ಮಾರ್ಚ್ 2007.**

The Karnataka Preservation of Trees Act 1976 (Karnataka Act 76 of 1976) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲ್ಯಾಂಗ್ವೇಜ್ ಆಕ್ಟ್ 1963ರ ಪ್ರಕರನ 5ಎ ರ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ ಮರಗಳ ಸಂರಕ್ಷಣಾ ಅಧಿನಿಯಮ, 1976**

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು :**

**ಅಧ್ಯಾಯ – I**

**ಪ್ರಾರಂಭಿಕ**

## ಅಧ್ಯಾಯ – II

## ಮರಗಳ ಪ್ರಾಧಿಕಾರ

3. ಮರಗಳ ಪ್ರಾಧಿಕಾರದ ಸ್ಥಾಪನೆ.
4. ಮರಗಳ ಪ್ರಾಧಿಕಾರದ ಸಭೆಗಳು.

## ಅಧ್ಯಾಯ –□III

## ಅಧಿಕಾರಿಗಳು ಮತ್ತು ನೌಕರರು

5. ಮರಗಳ ಅಧಿಕಾರಿಯ ನೇಮಕಾತಿ.
6. ಇತರ ಅಧಿಕಾರಿಗಳ ನೇಮಕಾತಿ.

## ಅಧ್ಯಾಯ – IV

## ಮರಗಳ ಪ್ರಾಧಿಕಾರದ ಕರ್ತವ್ಯಗಳು

7. ಮರಗಳ ಪ್ರಾಧಿಕಾರದ ಕರ್ತವ್ಯಗಳು.

## ಅಧ್ಯಾಯ - V

## ಮರಗಳನ್ನು ಕಡಿಯುವುದರ ಬಗ್ಗೆ ನಿರ್ಬಂಧ ಮತ್ತು ಮರಗಳ ಸಂರಕ್ಷಣೆಯ ಹೊಣೆಗಾರಿಕೆ

8. ಮರಗಳನ್ನು ಕಡಿಯುವುದರ ಮೇಲೆ ನಿರ್ಬಂಧ.

8ಎ. 8ನೇ ಪ್ರಕರಣದ ಅಡಿ ಮಂಜೂರಾದ ಅನುಮತಿಯನ್ನು ರದ್ದುಗೊಳಿಸುವುದು ಅಥವಾ ಅಮಾನತುಗೊಳಿಸುವುದು.

9. ಸಾಕಷ್ಟು ಸಂಖ್ಯೆಯ ಮರಗಳನ್ನು ನೆಡುವುದು.
10. ಬಿದ್ದ ಅಥವಾ ನಾಶವಾದ ಮರಗಳ ಬದಲಿಗೆ ಮರಗಳನ್ನು ನೆಡುವುದು.
11. ಮರಗಳ ಸಂರಕ್ಷಣೆ.
12. ಮರಗಳನ್ನು ದತ್ತಕ ತೆಗೆದುಕೊಳ್ಳುವುದು.
13. ಮರಗಳನ್ನು ನೆಡುವುದಕ್ಕಾಗಿ ನೀಡಿದ ಆದೇಶಗಳನ್ನು ಪಾಲಿಸಲು ತಪ್ಪಿದಲ್ಲಿ ವೆಚ್ಚದ ವಸೂಲಿ.
14. ಅಪೀಲು

## ಅಧ್ಯಾಯ - VI

## ದಂಡಗಳು ಮತ್ತು ಅವುಗಳ ಕಾರ್ಯವಿಧಾನ

15. ಸ್ವತ್ತನ್ನು ಜಪ್ತಿ ಮಾಡುವುದು.

15ಎ. ತನಿಖೆಯ ವಿಷಯದಲ್ಲಿ ಮರಗಳ ಅಧಿಕಾರಿಯ ಅಧಿಕಾರಗಳು.

15ಬಿ. ಮರಗಳ ಅಧಿಕಾರಿಯಿಂದ ವರದಿ.

16. 15ನೇ ಪ್ರಕರಣದ ಅಡಿಯಲ್ಲಿ ಜಪ್ತಿ ಮಾಡಿರುವ ಸ್ವತ್ತಿನ ಬಿಡುಗಡೆಗೆ ಅಧಿಕಾರ.
17. ವಾರೆಂಟ್ ಇಲ್ಲದೆ ದಸ್ತಗಿರಿ ಮಾಡಲು ಅಧಿಕಾರ.
18. ದಸ್ತಗಿರಿ ಮಾಡಲಾಗಿರುವ ವ್ಯಕ್ತಿಯನ್ನು ಬಿಡುಗಡೆ ಮಾಡಲು ಅಧಿಕಾರ.
19. ಅಪರಾಧ ಮಾಡುವುದನ್ನು ತಡೆಯಲು ಅಧಿಕಾರ.
20. ಪ್ರತಿಷೇಧಿತವಾಗದ ಇತರ ಕಾನೂನುಗಳ ಪ್ರವರ್ತನೆ
21. ಅಪರಾಧಗಳ ಬಗ್ಗೆ ರಾಜಿ ಮಾಡಿಕೊಳ್ಳಲು ಅಧಿಕಾರ.
22. ದಂಡಗಳು.

22ಎ. ಕಂಪನಿಗಳಿಂದ ಅಪರಾಧಗಳು.

## ಅಧ್ಯಾಯ – VII

## ಸಂಕೀರ್ಣ

23. ನಿಯಮಗಳು.
24. ನಷ್ಟಭರ್ತಿ.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

I

**1976ರ ಅಧಿನಿಯಮ 76.–** ಕೈಗಾರಿಕೀಕರಣ ಮತ್ತು ಜನಸಂಖ್ಯೆಯ ಒತ್ತಡದಿಂದಾಗಿ ನಗರ ಪ್ರದೇಶಗಳಲ್ಲಿ ಮರಗಳ ಬೆಳವಣಿಗೆಗೆ ಭಾರೀ ಹಾನಿ ಉಂಟಾಗಿದೆ. ನಮ್ಮ ನಗರಗಳು ಮತ್ತು ಪಟ್ಟಣಗಳಲ್ಲಿನ ಸ್ಥಳಾವಕಾಶದ ಮೇಲಿನ ಒತ್ತಡವು ನೆರಳು ನೀಡುವ, ವಾತಾವರಣದ ವೈಪರೀತ್ಯಗಳನ್ನು ತಗ್ಗಿಸುವ, ಸಹಜ ಸೌಂದರ್ಯ ನೀಡುವ, ಕಲುಷಿತ ವಾತಾವರಣವನ್ನು ಪರಿಶುದ್ಧಗೊಳಿಸುವ, ಶಬ್ದವನ್ನು ಕಡಿಮೆ ಮಾಡುವಂತಹ ಮರಗಳಿಗೆ ತೀವ್ರ ವಿಪತ್ತನ್ನು ಒಡ್ಡಿದೆ.

ಭಾರಿ ಮಳೆ ಬೀಳುವ ವಲಯದಲ್ಲಿನ ಅರಣ್ಯ ಪ್ರದೇಶದ ಶೇಕಡವಾರು ಅಗತ್ಯ ಮಟ್ಟಕ್ಕಿಂತ ಬಹಳ ಕಡಿಮೆ ಇದೆ. ಉಳಿದ ಪ್ರದೇಶಗಳಲ್ಲಿ ಮರಗಳನ್ನು ಕಡಿದುಹಾಕುವುದರಿಂದಾಗಿ ವಿನಾಶಕಾರಿ ಪರಿಣಾಮ ಬೀರಿದೆ. ಇದು ದಕ್ಷಿಣ ಭಾರತದ ಪ್ರಮುಖ ನದಿಗಳ ಜಲಾನಯನ ವಲಯವಾಗಿದೆ. ಭಾರಿ ಪ್ರಮಾಣದಲ್ಲಿ ಮರಗಳನ್ನು ಕಡಿಯುವುದರಿಂದಾಗಿ ಮಳೆಗಾಲದಲ್ಲಿ ಭೂಸವೆತ ಮತ್ತು ಪ್ರವಾಹಗಳು ಹೆಚ್ಚಿವೆ. ಹೀಗಾಗಿ ವರ್ಷದ ಬಾಕಿ ಸಮಯದಲ್ಲಿ ತೊರೆಹರಿವು ಕಡಿಮೆಯಾಗಿದೆ. ನಮ್ಮ ಬಹು ಕೋಟಿ ಯೋಜನೆಗಳ ಜಲಾಶಯಗಳಲ್ಲಿ ಹೂಳು ಸೇರಿಕೆ ಹೆಚ್ಚಾಗಿದೆ.

ರಾಜ್ಯದ ಪೂರ್ವ ಜಿಲ್ಲೆಗಳಿರುವ ವಿಶಾಲ ಪ್ರದೇಶದಲ್ಲಿ ಕ್ಷಾಮ ಮತ್ತು ಬರಗಾಲ ಪೀಡಿತ ಪರಿಸ್ಥಿತಿ ಮರುಕಳಿಸುತ್ತಲೇ ಇದೆ. ಮಳೆ ಬೇಕಾಬಿಟ್ಟಿ ಬರುತ್ತಿದೆ. ಬೀಸುವ ಗಾಳಿಯ ಪರಿಣಾಮವಾಗಿ ಮಣ್ಣಿನ ತೇವಾಂಶವು ವಿಪರೀತವಾಗಿ ನಶಿಸುತ್ತಿದೆ. ಉರುವಲು ಕೊರತೆಯಿಂದಾಗಿ, ದನಗಳ ಸಗಣಿಯನ್ನೇ ಬೆರಣಿಯಾಗಿ ಇಂಧನದಂತೆ ಬಳಸಲಾಗುತ್ತಿದೆ. ರಸ್ತೆ ಬದಿಯ ಸಾಲುಮರಗಳು ನಾಶವಾಗಿವೆ. ಅರಣ್ಯ ಕೃಷಿ ಮತ್ತು ಕೃಷಿಗಾರಿಕೆಗಳನ್ನು ವಿವೇಚನೆಯಿಂದ ಸಮೀಕರಿಸಿದಲ್ಲಿ ಕೃಷಿ ಮತ್ತು ಪಶುಸಂಗೋಪನೆಗಳಿಗೆ ಪ್ರಯೋಜನಕಾರಿಯಾಗಬಲ್ಲದು. ಹೊಲಗಳ ಬದುಗಳಲ್ಲಿ, ಸಮ ಅಂತರಗಳಲ್ಲಿ ವಿರಳವಾಗಿ ಬೆಳೆಸಿದ ಮರಗಳು ನೆಡುತೋಪುಗಳಿಗಿಂತ ಪರಿಣಾಮಕಾರಿಯಾಗಿರುತ್ತವೆ. ದ್ವಿದಳ ಜಾತಿಯ ಗಿಡಗಳನ್ನು ಬೆಳೆಸುವುದರಿಂದಾಗಿ ಮಣ್ಣಿನ ಸುಧಾರಣೆ, ಹಸಿರೆಲೆ ಗೊಬ್ಬರ ಮತ್ತು ದನಗಳಿಗೆ ಮೇವು ದೊರೆಯುವ ಮೂಲಕ ಕೃಷಿಗೆ ಪ್ರಯೋಜನಕಾರಿಯಾಗುತ್ತದೆ. ಅಲ್ಲದೆ, ಚೌಬೀನೆ ಮತ್ತು ಉರುವಲನ್ನು ಒದಗಿಸುತ್ತದೆ.

ಸದ್ಯ ನಾವು ಮರಗಳನ್ನು ಕೆಡಹುವುದನ್ನು ನಿರ್ಬಂಧಿಸಲು ಮತ್ತು ನಿಯಂತ್ರಿಸಲು ಮತ್ತು ಮರಗಳಿಲ್ಲದ ಕಡೆಗೆ ಕನಿಷ್ಠ ಸಂಖ್ಯೆಯ ಮರಗಳನ್ನು ಬೆಳೆಸುವಂತೆ ನಿಯಮಿಸಲು ಶಾಸನ ರಚನೆ ಮಾಡುವ ಅನಿವಾರ್ಯ ಸ್ಥಿತಿಗೆ ಬಂದು ತಲುಪಿದ್ದೇವೆ.

(ದಿನಾಂಕ 8.11.1976ರ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV– 2ಎ ಯಲ್ಲಿ ಸಂಖ್ಯೆ 4417 ಎಂದು 16ನೇ ಪುಟದಲ್ಲಿ ಪ್ರಕಟಿಸಲಾಗಿದೆ.)

II

**1977ರ ತಿದ್ದುಪಡಿ ಮಾಡುವ ಅಧಿನಿಯಮ 21.–** ಕರ್ನಾಟಕ ಮರಗಳ ಸಂರಕ್ಷಣಾ ಅಧಿನಿಯಮ, 1976ರ (1976ರ ಕರ್ನಾಟಕ ಅಧಿನಿಯಮ ಸಂಖ್ಯೆ 76) 8ನೇ ಪ್ರಕರಣದ 6ನೇ ಉಪ ಪ್ರಕರಣದ ಪ್ರಕಾರ, ಒಂದು ಕುಟುಂಬದ ವಾಸ್ತವಿಕ ಗೃಹ ಬಳಕೆಗಾಗಿ ಅಂಥ ಕುಟುಂಬದ ಯಾರೇ ಒಬ್ಬ ಸದಸ್ಯನು ಅಥವಾ ಹೆಚ್ಚು ಸದಸ್ಯರು, 2 ಘನ ಮೀಟರ್ ಗಾತ್ರದ ಚೌಬೀನೆಯನ್ನು ಮತ್ತು ಒಂದೂವರೆ ಟನ್ ಸೌದೆಯಷ್ಟನ್ನು ಮೀರದಂತೆ ಮರಗಳನ್ನು ಕಡಿಯಲು ಹಕ್ಕುದಾರರಾಗಿರುತ್ತಾರೆ. ಮರಗಳನ್ನು ಕಡಿಯಲು ಇರುವ ಅಂಥ ಮಿತಿಯನ್ನು ಸಡಿಲಗೊಳಿಸುವಂತೆ ಕೋರಿ ವಿವಿಧ ವೇದಿಕೆಗಳಿಂದ ಸರ್ಕಾರಕ್ಕೆ ಕೋರಿಕೆಗಳನ್ನು ಸಲ್ಲಿಸಲಾಗಿತ್ತು. ಕೃಷಿಕ ಜನಸಂಖ್ಯೆಯ ವಾಸ್ತವಿಕ ಅಗತ್ಯತೆಗಳನ್ನು ಪರಿಗಣಿಸಿದ ತರುವಾಯ, ಹಾಗೆ ಕಡಿಯುವ ಮರಗಳಿಂದ 2 ಘನ ಮೀಟರ್ ಗಾತ್ರದ ಚೌಬೀನೆಯನ್ನು ಮತ್ತು ಐದು ಟನ್‌ಗಳಿಗೆ ಮೀರದಷ್ಟು ಸೌದೆಯನ್ನು ಹೊಂದುವಂತೆ ಆ ಮಿತಿಯನ್ನು ಸಡಿಲಗೊಳಿಸಲು ಈಗ ನಿರ್ಧರಿಸಲಾಗಿದೆ.

ವಾಣಿಜ್ಯ ಉದ್ದೇಶಗಳಿಗೆ ಮತ್ತು ಗೃಹೋಪಯೋಗಿ ಬಳಕೆಯ ಸಲುವಾಗಿ ಕ್ಯಾಸುರಿನಾ ಮತ್ತು ಹಾಪಿಯಾ ವೈಟಿನಾ ಮರಗಳನ್ನು ನೆಡುವಂತಹ ಮಲೆನಾಡ ಪ್ರದೇಶಗಳಲ್ಲಿ ಅಂಥ ಮರಗಳನ್ನು ಕೆಡಹುವುದರ ಮೇಲೆ ಇರುವ ಯಾವುವೇ ನಿರ್ಬಂಧಗಳು, ಅಂಥ ಮರಗಳನ್ನು ನೆಡುವುದಕ್ಕೆ ಅಡ್ಡಿಯಾಗಬಹುದು ಎಂಬ ಸಲಹೆಯನ್ನು ಕೂಡ ಸರ್ಕಾರವು ಸ್ವೀಕರಿಸಿದೆ. ಅಂತಹ ಮರಗಳ ನೆಡುತೋಪುಗಳನ್ನು ಬೆಳೆಸಲು ಖಾಸಗೀ ವ್ಯಕ್ತಿಗಳಿಗೆ ಪ್ರೋತ್ಸಾಹ ನೀಡುವುದು ಸರ್ಕಾರದ ಉದ್ದೇಶವಾಗಿದೆಯೇ ಹೊರತು ಅಂತಹ ಮರಗಳನ್ನು ಕೆಡವಿಹಾಕಲು ಯಾವುದೇ ನಿರ್ಬಂಧ ಹೇರುವುದು ಅಲ್ಲ. ಆದುದರಿಂದ, ಮೇಲಿನ ಎರಡು ವಿಧದ ಮರಗಳಿಗೆ ಈ ಅಧಿನಿಯಮದ 8ನೇ ಪ್ರಕರಣದ ವ್ಯಾಪ್ತಿಯಿಂದ ವಿನಾಯಿತಿ ನೀಡುವುದು ಅಗತ್ಯವಾಗಿರುತ್ತದೆಂದು ಕೂಡ ಪರಿಗಣಿಸಲಾಗಿದೆ.

ಆದುದರಿಂದ ಈ ವಿಧೇಯಕ.

(ದಿನಾಂಕ 17.7.1977ರ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ –೨IV, 2ಎ ದಲ್ಲಿ ಸಂಖ್ಯೆ 489 ಎಂದು 3ನೇ ಪುಟದಲ್ಲಿ ಪ್ರಕಟಿಸಲಾಗಿದೆ.)೨

III

**1979ರ ತಿದ್ದುಪಡಿ ಮಾಡುವ ಅಧಿನಿಯಮ 14.–** ಚಹಾ ಕಾರ್ಖಾನೆಗಳನ್ನು ನಡೆಸಲು ಅಗತ್ಯವಾದ ಉರುವಲನ್ನು ಒದಗಿಸುವ ಉದ್ದೇಶಕ್ಕಾಗಿ, ಚಹ ತೋಟಗಳಿಗೆ ಸೇರಿದಂತಹ ಪೂರಕ ಪ್ರದೇಶಗಳಿಗೆ ಈ ಅಧಿನಿಯಮದ ಉಪಬಂಧಗಳಿಂದ ವಿನಾಯಿತಿ ನೀಡುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ನಿರಸನಗೊಳಿಸುವ ಪ್ರಕರಣದಲ್ಲಿ ಕೆಲವು ಪದಗಳನ್ನು ಬದಲಾವಣೆ ಮಾಡುವ ಅವಕಾಶವನ್ನು ಉಪಯೋಗಿಸಿಕೊಳ್ಳಲಾಗಿದೆ.

ವಿಧಾನಸಭೆಯು ಅಧಿವೇಶನದಲ್ಲಿಲ್ಲದ ಕಾರಣ ಒಂದು ಅಧ್ಯಾದೇಶವನ್ನು ಹೊರಡಿಸಲಾಗಿತ್ತು. ಸದರಿ ಅಧ್ಯಾದೇಶದ ಬದಲಿಗೆ ಈ ವಿಧೇಯಕವನ್ನು ಮಂಡಿಸಲು ಉದ್ದೇಶಿಸಲಾಗಿದೆ.

(ವಿ.ಪ. ವಿಧೇಯಕ ಸಂಖ್ಯೆ 1979ರಿಂದ ಪಡೆಯಲಾಗಿದೆ.)

IV

**1987ರ ತಿದ್ದುಪಡಿ ಮಾಡುವ ಅಧಿನಿಯಮ 39.–** ಕರ್ನಾಟಕ ಮರಗಳ ಸಂರಕ್ಷಣಾ ಅಧಿನಿಯಮ, 1976ರ 8ನೇ ಪ್ರಕರಣದ (7)ನೇ ಉಪ ಪ್ರಕರಣದ ಪ್ರಕಾರ ಯಾರೇ ವ್ಯಕ್ತಿಯ ಒಡೆತನ ಅಥವಾ ಅಧಿಭೋಗದಲ್ಲಿರುವ ಮರಗಳನ್ನು ಕೆಡವಲು ಇರುವ ನಿರ್ಬಂಧಗಳು ಕ್ಯಾಸುರಿನಾ ಮತ್ತು ಹೊಪಿಯಾ ವೈಟಿನಾ ಮರಗಳನ್ನು ಕೆಡವಿ ಹಾಕುವುದಕ್ಕೆ ಅನ್ವಯಿಸುವುದಿಲ್ಲ. ಜನರು ಜೀವಿಪರಿಸರ ಸ್ಥಿತಿಗತಿಯನ್ನು ಉತ್ತಮಗೊಳಿಸಲು ಮತ್ತು ತಮಗೆ ಅಗತ್ಯವಾದ ಉರುವಲು, ಮೇವು, ಇತ್ಯಾದಿಗಳನ್ನು ಪೂರೈಸಿಕೊಳ್ಳಲು ತಮ್ಮ ಭೂಮಿಯಲ್ಲಿ ವಿವಿಧ ಜಾತಿಯ ಮರಗಳನ್ನು ನೆಡಲು ಪ್ರಾರಂಭಿಸಿರುತ್ತಾರೆ. ಮೇಲೆ ಹೇಳಲಾದ ಉದ್ದೇಶಗಳಿಗಾಗಿ ಮಾಲೀಕರು ಮತ್ತು ಅಧಿಭೋಗದಾರರು ಬೆಳೆಸಿರುವಂಥ ಮರಗಳನ್ನು ಕಡಿಯಲು ವಿಧಿಸಿದ ನಿರ್ಬಂಧವು, ಖಾಸಗೀ ಭೂಮಿಗಳಲ್ಲಿ ಮರ ಬೆಳೆಸುವಿಕೆಗೆ ಅನುತ್ತೇಜಕವಾಗಿ ಪರಿಣಮಿಸಬಹುದು. ಆದುದರಿಂದ, 8ನೇ ಪ್ರಕರಣದಲ್ಲಿರುವ ನಿರ್ಬಂಧಗಳು ಅಂಥ ಜಾತಿಯ ಮರಗಳಿಗೆ ಅನ್ವಯಿಸದಂತೆ ಇನ್ನೂ ಕೆಲವು ಜಾತಿಯ ಮರಗಳನ್ನು ಸೇರಿಸಲು (7)ನೇ ಉಪ ಪ್ರಕರಣವನ್ನು ತಿದ್ದುಪಡಿ ಮಾಡಲು ಉದ್ದೇಶಿಸಲಾಗಿದೆ.

ಆದುದರಿಂದ ಈ ವಿಧೇಯಕ.

(ದಿನಾಂಕ 8.9.1987ರ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV, 2–ಎ ಯಲ್ಲಿ ಸಂಖ್ಯೆ 592 ಆಗಿ ಪುಟ 3 ರಲ್ಲಿ ಪ್ರಕಟಿಸಲಾಗಿದೆ.)

V

**1998ರ ತಿದ್ದುಪಡಿ ಮಾಡುವ ಅಧಿನಿಯಮ 12.–** ಈ ಮುಂದಿನ ವಿಷಯಗಳಿಗೆ ಉಪಬಂಧಿಸುವುದಕ್ಕಾಗಿ, ಕರ್ನಾಟಕ ಅರಣ್ಯ ಅಧಿನಿಯಮ, 1963ನ್ನು (1964ರ ಕರ್ನಾಟಕ ಅಧಿನಿಯಮ 5) ತಿದ್ದುಪಡಿ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ, ಎಂದರೆ:–

(1) ಗಂಧದ ಮರದ ಪರಿಭಾಷೆಯಲ್ಲಿ "ಗಂಧದೆಣ್ಣೆ" ಯನ್ನು ಸೇರಿಸುವುದು;

(2) ಗ್ರಾಮ ಅರಣ್ಯ ಸಮಿತಿಯನ್ನು ಪರಿಭಾಷಿಸುವುದು ಮತ್ತು ಅದರ ರಚನೆಗೆ ಉಪಬಂಧ ಕಲ್ಪಿಸುವುದು;

(3) ಮರಕೊಯ್ಯುವ ಕಾರ್ಖಾನೆ, ಇತ್ಯಾದಿಗಳಿಗೆ ಲೈಸೆನ್ಸ್ ಮಂಜೂರಾತಿ ಅಥವಾ ನವೀಕರಣೆಗಾಗಿ ಶುಲ್ಕ ವಿಧಿಸುವುದಕ್ಕೆ ಉಪಬಂಧ ಕಲ್ಪಿಸುವುದು;

(4) 62ನೇ ಪ್ರಕರಣದ ಮೇರೆಗೆ ಸ್ವಾಧೀನ ಪಡಿಸಿಕೊಂಡ ಸ್ವತ್ತಿನ ಬಿಡುಗಡೆಗೆ ಮೊದಲು, ಅರಣ್ಯ ಅಧಿಕಾರಿಯು ಅಂದಾಜು ಮಾಡಿದ ಮೊತ್ತಕ್ಕೆ ಸಮವಾದ ಬ್ಯಾಂಕ್ ಗ್ಯಾರಂಟಿ ನೀಡುವಂತೆ ಅಗತ್ಯಪಡಿಸುವುದು;

(5) ರಾಜಿ ಮೊತ್ತವನ್ನು ಐದು ಸಾವಿರ ರೂಪಾಯಿಗಳಿಂದ ಐವತ್ತು ಸಾವಿರ ರೂಪಾಯಿಗಳಿಗೆ ಹೆಚ್ಚಿಸುವುದು;

(6) ಲೈಸೆನ್ಸ್‌ದಾರನ ನೌಕರರ ಕೃತ್ಯಗಳಿಗಾಗಿ ದಂಡಿಸುವುದಕ್ಕೆ ಉಪಬಂಧಿಸುವುದು, ಮತ್ತು ಈ ಮುಂದಿನ ವಿಷಯಗಳಿಗೆ ಉಪಬಂಧಿಸಲು ಕರ್ನಾಟಕ ಮರಗಳ ಸಂರಕ್ಷಣಾ ಅಧಿನಿಯಮ, 1976ನ್ನು ತಿದ್ದುಪಡಿ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ, ಎಂದರೆ:–

(i) ಸ್ವೀಕರಿಸಿದ ಅರ್ಜಿಗಳನ್ನು ಮೂರು ತಿಂಗಳ ಅವಧಿಯೊಳಗೆ ವಿಲೆ ಮಾಡುವಂತೆ ಮರಗಳ ಅಧಿಕಾರಿಗೆ ಅಗತ್ಯಪಡಿಸುವುದು;

(ii) ಕೆಲವು ಸಂದರ್ಭಗಳಲ್ಲಿ ಅನುಮತಿಯನ್ನು ರದ್ದುಗೊಳಿಸುವುದು ಅಥವಾ ಅಮಾನತಿನಲ್ಲಿಡಲು ಉಪಬಂಧಿಸುವುದು;

(iii) ರಬ್ಬರ್ ಮತ್ತು ಚಹ ಕೃಷಿಗಾಗಿ, ಅದರ ಕೃಷಿ ಅಥವಾ ಕೃಷಿ ವಿಸ್ತರಣೆಗಾಗಿ ಎಲ್ಲಾ ಮರಗಳನ್ನು ಕಡಿಯುವುದನ್ನು ಒಳಗೊಂಡಿದ್ದರೆ, 8ನೇ ಪ್ರಕರಣದ ಮೇರೆಗೆ ಮರಗಳನ್ನು ಕಡಿಯಲು ಅನುಮತಿ ನೀಡುವುದನ್ನು ನಿಷೇಧಿಸುವುದು.

ಆದುದರಿಂದ ಈ ವಿಧೇಯಕ.

(1997ರ ವಿ.ಪ. ವಿಧೇಯಕ ಸಂಖ್ಯೆ 5ರಿಂದ ಪಡೆಯಲಾಗಿದೆ (ಕಡತ ಸಂಖ್ಯೆ ಡಿಪಿಎಎಲ್ 53 ಎಲ್.ಜಿ.ಎನ್ 97).)

**VI**

**2000ರ ತಿದ್ದುಪಡಿ ಮಾಡುವ ಅಧಿನಿಯಮ 20.–** ಕರ್ನಾಟಕ ಅರಣ್ಯ ಅಧಿನಿಯಮ, 1963ಕ್ಕೆ ಸಂಬಂಧಿಸುವಷ್ಟರ ಮಟ್ಟಿಗೆ, 1999ರ ಕರ್ನಾಟಕ ಅರಣ್ಯ ಮತ್ತು ಇತರ ಕೆಲವು ಕಾನೂನುಗಳ (ತಿದ್ದುಪಡಿ) ವಿಧೇಯಕವು ಈ ಮುಂದಿನಂತೆ ಉಪಬಂಧಿಸುತ್ತದೆ,–

(1) ದಂಡ ಪ್ರಕ್ರಿಯಾ ಸಂಹಿತೆ, 1973ರ ಮೇರೆಗೆ ತನಿಖಾ ವಿಷಯದಲ್ಲಿ ಪೊಲೀಸ್ ಠಾಣೆಯ ಪ್ರಭಾರದಲ್ಲಿರುವ ಅಧಿಕಾರಿಗೆ ಪ್ರದತ್ತವಾದಂತಹವೇ ಅಧಿಕಾರಗಳನ್ನು ಅರಣ್ಯ ಅಧಿಕಾರಿಗಳಿಗೆ ನಿಹಿತಗೊಳಿಸುವುದು ಮತ್ತು ಅಂಥ ಅರಣ್ಯಾಧಿಕಾರಿಯ ವರದಿಯನ್ನು ಸದರಿ ಸಂಹಿತೆಯ 190ನೇ ಪ್ರಕರಣದ ಉದ್ದೇಶಗಳಿಗಾಗಿನ ವರದಿಯಂತೆ ಪರಿಗಣಿಸುವುದು;

(2) ಅರಣ್ಯ ಉತ್ಪನ್ನದ ಸಂಬಂಧದಲ್ಲಿ ಅರಣ್ಯ ಅಧಿಕಾರಿಯು ನೀಡುವ ಪ್ರಮಾಣ ಪತ್ರವು ಸಾಕ್ಷ್ಯವಾಗಿರತಕ್ಕದ್ದು;

(3) ಅಪರಾಧಗಳು ನಡೆಯುವುದನ್ನು ತಡೆಗಟ್ಟುವುದು;

(4) ಈ ಅಧಿನಿಯಮದ ಮೇರೆಗೆ ಬಾಕಿಯಿರುವ ತೆರಿಗೆ, ಸ್ವಾಮ್ಯಶುಲ್ಕ, ಇತ್ಯಾದಿಗಳ ವಸೂಲಿಗಾಗಿ ಅರಣ್ಯ ಸಂರಕ್ಷಣಾಧಿಕಾರಿಯು ಪ್ರಮಾಣಪತ್ರ ನೀಡುವುದು ಮತ್ತು ಅದನ್ನು ಸಿವಿಲ್ ನ್ಯಾಯಾಲಯದ ಡಿಕ್ರಿಯಂತೆ ಪರಿಗಣಿಸುವುದು;

(5) ಅರಣ್ಯಾಧಿಕಾರಿಯು ಕರ್ತವ್ಯ ನಿರ್ವಹಣೆಯ ನೆಪದಲ್ಲಿ ಮಾಡಿದ ಕೃತ್ಯಗಳ ಸಂಬಂಧದಲ್ಲಿ ಒಂದು ದಾವೆ ಅಥವಾ ಕಾನೂನು ವ್ಯವಹರಣೆ ಹೂಡಲು ಮಂಜೂರಾತಿಯನ್ನು ಅಗತ್ಯಪಡಿಸುವುದು.

ಅದಲ್ಲದೆ, ತನಿಖೆ ವಿಷಯದಲ್ಲಿ ದಂಡ ಪ್ರಕ್ರಿಯಾ ಸಂಹಿತೆ, 1973ರ ಮೇರೆಗೆ ಪೊಲೀಸ್ ಠಾಣೆಯ ಪ್ರಭಾರದಲ್ಲಿರುವ ಅಧಿಕಾರಿಗೆ ಇರುವಂತಹ ಅಧಿಕಾರಗಳನ್ನೇ ಮರಗಳ ಅಧಿಕಾರಿಯಲ್ಲಿ ನಿಹಿತಗೊಳಿಸುವುದಕ್ಕಾಗಿ ಮತ್ತು ಆತನ ವರದಿಯನ್ನು 190ನೇ ಪ್ರಕರಣದ ಉದ್ದೇಶಗಳಿಗಾಗಿ ಇರುವ ವರದಿಯಂತೆ ಪರಿಗಣಿಸುವುದಕ್ಕಾಗಿ 1976ರ ಕರ್ನಾಟಕ ಮರಗಳ ಸಂರಕ್ಷಣಾ ಅಧಿನಿಯಮವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

ಆದುದರಿಂದ ಈ ವಿಧೇಯಕ.

(1999ರ ವಿ.ಸ. ವಿಧೇಯಕ ಸಂಖ್ಯೆ 13 ರಿಂದ ಪಡೆಯಲಾಗಿದೆ.)

## 1976ರ ಕರ್ನಾಟಕ ಅಧಿನಿಯಮ ಸಂಖ್ಯೆ 76

**(1976ರ ಡಿಸೆಂಬರ್ ನಾಲ್ಕನೇ ದಿನದಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಮೊದಲು ಪ್ರಕಟವಾಗಿದೆ)**

## ಕರ್ನಾಟಕ ಮರಗಳ ಸಂರಕ್ಷಣಾ ಅಧಿನಿಯಮ, 1976

(1976ರ ಡಿಸೆಂಬರ್ ಮೊದಲ ದಿನದಂದು ರಾಜ್ಯಪಾಲರ ಅನುಮೋದನೆ ಪಡೆದಿದೆ.)

(1977ರ 21, 1979ರ 14, 1987ರ 39, 1998ರ 12 ಮತ್ತು 2000ದ 20ನೇ ಅಧಿನಿಯಮಗಳ ಮೂಲಕ ತಿದ್ದುಪಡಿಯಾದಂತೆ.)

ರಾಜ್ಯದಲ್ಲಿನ ಮರಗಳ ಸಂರಕ್ಷಣೆಗಾಗಿ ಉತ್ತಮ ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.

ತ್ವರಿತ ಗತಿಯ ನಗರೀಕರಣ, ಕೈಗಾರಿಕೀಕರಣ ಮತ್ತು ಹೆಚ್ಚುತ್ತಿರುವ ಜನಸಂಖ್ಯೆಯಿಂದಾಗಿ ಕರ್ನಾಟಕ ರಾಜ್ಯದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಅಧಿಕ ಸಂಖ್ಯೆಯ ಮರಗಳನ್ನು ವಿವೇಚನಾ ರಹಿತವಾಗಿ ಕಡಿಯುತ್ತಿರುವುದರಿಂದಾಗಿ ಅನಿಯತವಾಗಿ ಮಳೆ ಬೀಳುವುದು, ಬರ ಮತ್ತು ಪ್ರವಾಹಗಳು ಮರುಕಳಿಸುವುದು, ಮಣ್ಣಿನ ಸವೆತ ಉಂಟಾಗುವುದು ಮತ್ತು ತತ್ಪರಿಣಾಮವಾಗಿ ಜೀವಿ ಪರಿಸ್ಥಿತಿಯಲ್ಲಿ ಕ್ಷೋಭೆ ಸಂಭವಿಸುವುದು – ಇವುಗಳಿಗೆ ಎಡೆಮಾಡಿಕೊಟ್ಟಿರುವುದರಿಂದ;

ಮರ ಕಡಿಯುವುದನ್ನು ನಿಯಂತ್ರಿಸುವುದರ ಮೂಲಕ ರಾಜ್ಯದಲ್ಲಿನ ಮರಗಳ ಸಂರಕ್ಷಣೆ ಮಾಡುವುದಕ್ಕಾಗಿ ಮತ್ತು ಜೀವಿ ಪರಿಸ್ಥಿತಿ ಸಮತೋಲನವನ್ನು ಪುನರ್‌ಸ್ಥಾಪಿಸಲು ಸಾಕಷ್ಟು ಸಂಖ್ಯೆಯ ಮರಗಳನ್ನು ನೆಡುವುದಕ್ಕಾಗಿ ಮತ್ತು ಅದಕ್ಕೆ ಸಂಬಂಧಿಸಿದ ವಿಷಯಗಳಿಗಾಗಿ ಉಪಬಂಧಿಸುವುದು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಇಪ್ಪತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

### ಅಧ್ಯಾಯ – I

### ಪ್ರಾರಂಭಿಕ

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಮರಗಳ ಸಂರಕ್ಷಣಾ ಅಧಿನಿಯಮ, 1976 ಎಂದು ಕರೆಯತಕ್ಕದ್ದು.

(2) ಇದು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು.

(3) ಈ ಪ್ರಕರಣವು 1976ರ ಜುಲೈ ಹದಿನೇಳನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು ಮತ್ತು ಇತರ ಉಪಬಂಧಗಳು ರಾಜ್ಯ ಸರ್ಕಾರವು ಅಧಿಸೂಚನೆ ಮೂಲಕ ಗೊತ್ತುಪಡಿಸಬಹುದಾದಂಥ [1][ದಿನಾಂಕ][1] ದಂದು ಜಾರಿಗೆ ಬರತಕ್ಕದ್ದು ಮತ್ತು ಈ ಅಧಿನಿಯಮದ ವಿವಿಧ ಉಪಬಂಧಗಳಿಗೆ, ವಿವಿಧ ನಗರ ಪ್ರದೇಶಗಳು ಮತ್ತು ಗ್ರಾಮೀಣ ಪ್ರದೇಶಗಳಿಗೆ ಅಥವಾ ಅವುಗಳ ಭಾಗಗಳಿಗೆ ವಿವಿಧ ದಿನಾಂಕಗಳನ್ನು ಗೊತ್ತುಪಡಿಸಬಹುದು.

1. ಈ ಅಧಿನಿಯಮದ ಕೆಲವು ಪ್ರಕರಣಗಳು ಅಧಿಸೂಚನೆ ಮೂಲಕ 1.11.1981ರಿಂದ ಜಾರಿಗೆ ಬಂದಿವೆ ಮತ್ತು ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯ ಭಾಗದಲ್ಲಿದೆ.

2. **ಪರಿಭಾಷೆಗಳು.–** (1) ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) ಯಾವುದೇ ಪ್ರದೇಶಕ್ಕೆ ಸಂಬಂಧಿಸಿದಂತೆ "ಗೊತ್ತುಪಡಿಸಲಾದ ದಿನ" ಎಂದರೆ 1ನೇ ಪ್ರಕರಣದ (3)ನೇ ಉಪ ಪ್ರಕರಣದ ಮೇರೆಗೆ ಅಧಿಸೂಚಿಸಲಾದ ದಿನಾಂಕ;

(ಬಿ) "ಸ್ಥಳೀಯ ಪ್ರಾಧಿಕಾರ" ಎಂದರೆ ಒಂದು ಪುರಸಭಾ ನಿಗಮ, ಅಥವಾ ಒಂದು ಪುರಸಭಾ ಪರಿಷತ್ತು ಅಥವಾ ಒಂದು [1][ಪಟ್ಟಣ ಪಂಚಾಯತಿ ಅಥವಾ ಒಂದು ತಾಲ್ಲೂಕು ಪಂಚಾಯಿತಿ][1];

1. 1998ರ ಅಧಿನಿಯಮ 12ರ ಮೂಲಕ 11.05.1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಸಿ) "ಮರಗಳ ಸಂರಕ್ಷಣೆ" ಎಂದರೆ ಮರಗಳ ಸಾಮಾನ್ಯ ಬೆಳವಣಿಗೆಗೆ ಪ್ರೋತ್ಸಾಹ ನೀಡುವ ಸಲುವಾಗಿ ಮರಗಳ ನಿರ್ವಹಣೆ ಮತ್ತು ರಕ್ಷಣೆ ಮತ್ತು ಮರಗಳಿಗೆ ಉಂಟಾಗುವ ಹಾನಿಯನ್ನು ಅಥವಾ ಅವುಗಳನ್ನು ಕತ್ತರಿಸುವುದನ್ನು ಅಥವಾ ಕಡಿಯುವುದನ್ನು ತಡೆಗಟ್ಟುವುದು ಮತ್ತು ಇದರಲ್ಲಿ ಹೊಸ ಮರಗಳನ್ನು ಬೆಳೆಸುವುದು ಮತ್ತು ಮರಗಳನ್ನು ಸ್ಥಳಾಂತರಿಸಿ ಬೆಳೆಸುವುದು ಒಳಗೊಳ್ಳುತ್ತದೆ;

(ಡಿ) "ಸಂಬಂಧಪಟ್ಟ ಅಧಿನಿಯಮ" ಎಂದರೆ ಸ್ಥಳೀಯ ಪ್ರಾಧಿಕಾರವನ್ನು ಯಾವ ಅಧಿನಿಯಮದ ಅಡಿಯಲ್ಲಿ ರಚಿಸಲಾಗಿದೆಯೋ ಆ ಅಧಿನಿಯಮ;

(ಇ) "ಗ್ರಾಮೀಣ ಪ್ರದೇಶ" ಎಂದರೆ Iಮತ್ತು IIನೇ ಅನುಸೂಚಿಗಳಲ್ಲಿ ನಿರ್ದಿಷ್ಟಪಡಿಸಲಾದ ಮತ್ತು ಆ ರೀತಿಯ ಪ್ರದೇಶ;

(ಎಫ್) "ಮರ ಕಡಿಯುವುದು" ಎಂದರೆ ಕಾಂಡವನ್ನು ಬೇರುಗಳಿಂದ ಬೇರ್ಪಡಿಸುವುದು, ಮರವನ್ನು ಬೇರುಸಹಿತವಾಗಿ ಕಿತ್ತುಹಾಕುವುದು ಮತ್ತು ಇದರಲ್ಲಿ ಸುಡುವುದು ಅಥವಾ ಕತ್ತರಿಸುವುದು ಅಥವಾ ತೊಗಟೆ ಕೆತ್ತುವುದು ಅಥವಾ ಮರಗಳಿಗೆ ಗಣನೀಯ ಪ್ರಮಾಣದಲ್ಲಿ ಹಾನಿಯುಂಟು ಮಾಡಲು ಅಥವಾ ಅವುಗಳನ್ನು ನಾಶಗೊಳಿಸಲು ವೃಕ್ಷ ನಾಶಕಗಳನ್ನು ಪ್ರಯೋಗಿಸುವುದು ಒಳಗೊಳ್ಳುತ್ತದೆ;

(ಜಿ) "ಮರ" ಎಂದರೆ ಯಾವುದರ ಶಾಖೆಗಳು ಒಂದು ಮರದ ಕಾಂಡ ಅಥವಾ ಶರೀರದಿಂದ ಹೊರಹೊಮ್ಮಿವೆಯೋ ಹಾಗೂ ಅದರ ಮೇಲೆ ಅವಲಂಬಿತವಾಗಿವೆಯೋ ಮತ್ತು ಯಾವುದರ ಕಾಂಡ ಅಥವಾ ಶರೀರವು ಸುತ್ತಳತೆಯಲ್ಲಿ ಐದೂವರೆ ಸೆಂಟಿಮೀಟರಿಗಿಂತ ಕಡಿಮೆ ಇಲ್ಲವೋ ಹಾಗೂ ನೆಲಮಟ್ಟದಿಂದ ಒಂದು ಮೀಟರಿಗಿಂತ ಕಡಿಮೆ ಎತ್ತರ ಇಲ್ಲವೋ ಆ ಯಾವುದೇ ಕಾಡು ಗಿಡ ಮತ್ತು ಇದರಲ್ಲಿ ತಾಳೆ, ಬಿದಿರು, ಮೋಟು ಮರಗಳು, ಕುರುಚಲು ಗಿಡ, ಬೆತ್ತಗಳು ಮತ್ತು ಅಂಥ ಮರದ ಸಸಿಗಳು ಸೇರುತ್ತವೆ. ಆದರೆ ಇದರಲ್ಲಿ ಗಂಧದಮರ ಮತ್ತು ಬೀಟೆ ಮರಗಳು ಸೇರುವುದಿಲ್ಲ;

(ಹೆಚ್) "ಮರಗಳ ಅಧಿಕಾರಿ" ಎಂದರೆ ಈ ಅಧಿನಿಯಮದ ಉದ್ದೇಶಗಳಿಗಾಗಿ [1][ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ][1]ಯು (ಸಾಮಾನ್ಯ) ಮರಗಳ ಅಧಿಕಾರಿಯೆಂದು ನೇಮಿಸಬಹುದಾದಂತಹ ಒಬ್ಬ ಅರಣ್ಯಾಧಿಕಾರಿ;

1. 1998ರ ಅಧಿನಿಯಮ 12ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಐ) "ನಗರ ಪ್ರದೇಶ" ಎಂದರೆ ಒಂದು [1][ವಿಶಾಲವಾದ ನಗರ ಪ್ರದೇಶ, ಒಂದು ಚಿಕ್ಕ ನಗರ ಪ್ರದೇಶ ಅಥವಾ ಒಂದು ಮಧ್ಯಂತರ ನಗರ ಪ್ರದೇಶ][1] ವನ್ನು ಒಳಗೊಂಡಿರುವ ಒಂದು ಪ್ರದೇಶ;

1. 1998ರ ಅಧಿನಿಯಮ 12ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಜೆ) "ಮರಗಳ ಗುಂಪು" ಎಂದರೆ ಮರಗಳು ಮುಖ್ಯ ಬೆಳೆಯಾಗಿರುವ ಮತ್ತು ಪ್ರತಿಯೊಂದು ಹೆಕ್ಟೇರಿನಲ್ಲಿ ಅಂಥ ಮರಗಳ ಸರಾಸರಿ ಸಂಖ್ಯೆಯು ಇಪ್ಪತ್ತೈದಕ್ಕಿಂತ ಕಡಿಮೆ ಇಲ್ಲದ ಯಾವುದೇ ತುಂಡು ಜಮೀನು.

(2) ಇದರಲ್ಲಿ ಬಳಸಲಾಗಿರುವ ಆದರೆ ಪರಿಭಾಷಿಸಿಲ್ಲದ ಪದಗಳು ಮತ್ತು ಪದಾವಳಿಗಳು ಸಂಬಂಧಪಟ್ಟ ಅಧಿನಿಯಮದಲ್ಲಿ ಅವುಗಳಿಗೆ ನೀಡಲಾಗಿರುವ ಅರ್ಥಗಳನ್ನೇ ಹೊಂದಿರತಕ್ಕದ್ದು.

## ಅಧ್ಯಾಯ – II

## ಮರಗಳ ಪ್ರಾಧಿಕಾರ

3. **ಮರಗಳ ಪ್ರಾಧಿಕಾರದ ಸ್ಥಾಪನೆ.–** (1) ರಾಜ್ಯ ಸರ್ಕಾರವು, ಅಧಿಸೂಚನೆ ಮೂಲಕ ಪ್ರತಿಯೊಂದು ನಗರ ಪ್ರದೇಶ ಮತ್ತು ಪ್ರತಿಯೊಂದು ಗ್ರಾಮೀಣ ಪ್ರದೇಶಕ್ಕೆ ಒಂದು ಮರಗಳ ಪ್ರಾಧಿಕಾರವನ್ನು ರಚಿಸತಕ್ಕದ್ದು.

(2) ಅಂಥ ಪ್ರಾಧಿಕಾರವು ಈ ಮುಂದಿನಂತೆ ಐವರು ಸದಸ್ಯರನ್ನೊಳಗೊಂಡಿರತಕ್ಕದ್ದು:–

**(ಎ) ಒಂದು ನಗರ ಪ್ರದೇಶಕ್ಕೆ,–**

(i) ಸಂದರ್ಭಾನುಸಾರ ಪುರಸಭಾ ನಿಗಮ, ಪುರಸಭಾ ಪರಿಷತ್ತು ಅಥವಾ [1][ಪಟ್ಟಣ ಪಂಚಾಯಿತಿ][1] ಯ ಮಹಾಪೌರ ಅಥವಾ ಅಧ್ಯಕ್ಷ;

1. 1998ರ ಅಧಿನಿಯಮ 12ರ ಮೂಲಕ 11.05.1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ii) ವಿಭಾಗೀಯ ಅರಣ್ಯಾಧಿಕಾರಿ ಅಥವಾ ಆತನ ನಾಮ ನಿರ್ದೇಶಿತ ವ್ಯಕ್ತಿ;

(iii) ಅಧಿಕಾರ ವ್ಯಾಪ್ತಿ ಹೊಂದಿರುವ ಜಿಲ್ಲಾ ತೋಟಗಾರಿಕೆ ಅಧಿಕಾರಿ;

(iv) ಸಂದರ್ಭಾನುಸಾರ ಪುರಸಭಾ ಕಮಿಷನರ್ ಅಥವಾ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ; ಮತ್ತು

(v) ಸಂದರ್ಭಾನುಸಾರ, ಮಹಾಪೌರ ಅಥವಾ ಅಧ್ಯಕ್ಷನು ನಾಮನಿರ್ದೇಶಿಸಬಹುದಾದ ಪುರಸಭಾ ನಿಗಮ, ಪುರಸಭಾ ಪರಿಷತ್, [1][ಪಟ್ಟಣ ಪಂಚಾಯಿತಿ][1] ಯ ಒಬ್ಬ ಸದಸ್ಯ:

ಪರಂತು, ಪುರಸಭಾ ನಿಗಮ ಅಥವಾ ಪುರಸಭಾ ಪರಿಷತ್ತು ಅಥವಾ [1][ಪಟ್ಟಣ ಪಂಚಾಯಿತಿ][1] ಯು ರದ್ದಾಗಿರುವಲ್ಲಿ, ರಾಜ್ಯ ಸರ್ಕಾರವು ನಾಮ ನಿರ್ದೇಶಿಸಬಹುದಾದಂಥ ವ್ಯಕ್ತಿಯು ಸದಸ್ಯನಾಗಿರತಕ್ಕದ್ದು.

1. 1998ರ ಅಧಿನಿಯಮ 12ರ ಮೂಲಕ 11.05.1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**(ಬಿ) I□ನೇ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ ಗ್ರಾಮೀಣ ಪ್ರದೇಶಕ್ಕಾಗಿ,–**

(i) ಅಧಿಕಾರ ವ್ಯಾಪ್ತಿ ಹೊಂದಿರುವ ಸಂಬಂಧಪಟ್ಟ ಅರಣ್ಯ ಸಂರಕ್ಷಣಾಧಿಕಾರಿ;

(ii) ವಿಶೇಷ ಜಿಲ್ಲಾಧಿಕಾರಿ ಮತ್ತು ವಿಶೇಷ ಜಿಲ್ಲಾಧಿಕಾರಿಯಿಲ್ಲದಿರುವೆಡೆಯಲ್ಲಿ ಜಿಲ್ಲೆಯ ಜಿಲ್ಲಾಧಿಕಾರಿ;

(iii) ಅಧಿಕಾರ ವ್ಯಾಪ್ತಿ ಹೊಂದಿರುವ ಸೂಪರಿಂಟೆಂಡಿಂಗ್ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು; ಮತ್ತು

(iv) ರಾಜ್ಯ ಸರ್ಕಾರವು ನೇಮಕ ಮಾಡಿದ ಇಬ್ಬರು ಸರ್ಕಾರೇತರ ಸದಸ್ಯರು.

**(ಸಿ) ಅನುಸೂಚಿ – II ರಲ್ಲಿ ನಿರ್ದಿಷ್ಟಪಡಿಸಲಾದ ಗ್ರಾಮೀಣ ಪ್ರದೇಶಕ್ಕಾಗಿ,–**

[1][(i) ತಾಲೂಕು ಪಂಚಾಯಿತಿಯ ಅಧ್ಯಕ್ಷ;][1]

1. 1998ರ ಅಧಿನಿಯಮ 12ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ii) ಅಧಿಕಾರ ವ್ಯಾಪ್ತಿ ಹೊಂದಿರುವ ವಿಭಾಗ ಅಭಿವೃದ್ಧಿ ಅಧಿಕಾರಿ;

(iii) ವಿಭಾಗೀಯ ಅರಣ್ಯ ಅಧಿಕಾರಿಯು ನಾಮ ನಿರ್ದೇಶಿಸಿದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ;

(iv) ಅಧಿಕಾರ ವ್ಯಾಪ್ತಿ ಹೊಂದಿರುವ ಜಿಲ್ಲಾ ತೋಟಗಾರಿಕೆ ಅಧಿಕಾರಿ;

[1][(v) ಅಧ್ಯಕ್ಷನು ನಾಮ ನಿರ್ದೇಶಿಸಿದ ತಾಲ್ಲೂಕು ಪಂಚಾಯಿತಿಯ ಒಬ್ಬ ಸದಸ್ಯ.][1]

1. 1998ರ ಅಧಿನಿಯಮ 12ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ರಾಜ್ಯ ಸರ್ಕಾರವು ಸದಸ್ಯರಲ್ಲೊಬ್ಬರನ್ನು ಅಧ್ಯಕ್ಷರನ್ನಾಗಿ ನೇಮಕ ಮಾಡತಕ್ಕದ್ದು.

(4) ಮರಗಳ ಪ್ರಾಧಿಕಾರವು, ಮರಗಳ ಸಂರಕ್ಷಣೆಯಲ್ಲಿ ವಿಶೇಷ ಜ್ಞಾನ ಅಥವಾ ಪ್ರಾಯೋಗಿಕ ಅನುಭವ ಹೊಂದಿರುವಂತಹ ಸರ್ಕಾರೇತರ ಸಂಸ್ಥೆಗಳಿಂದ ಮೂವರನ್ನು ಮೀರದಷ್ಟು ಪ್ರತಿನಿಧಿಗಳನ್ನು ಸರ್ಕಾರವು ನಿರ್ಧರಿಸಬಹುದಾದಂಥ ರೀತಿಯಲ್ಲಿ ಮತ್ತು ನಿರ್ಧರಿಸಬಹುದಾದಂಥ ಅವಧಿಗೆ ಸಹ–ಸದಸ್ಯರನ್ನಾಗಿ ಸೇರಿಸಿಕೊಳ್ಳಬಹುದು.

4. **ಮರಗಳ ಪ್ರಾಧಿಕಾರದ ಸಭೆಗಳು.–** (1) ಮರಗಳ ಪ್ರಾಧಿಕಾರವು ಅಧ್ಯಕ್ಷರು ನಿರ್ಧರಿಸಬಹುದಾದಂಥ ಸ್ಥಳದಲ್ಲಿ ಮತ್ತು ಸಮಯದಲ್ಲಿ ಕನಿಷ್ಠಪಕ್ಷ ಮೂರು ತಿಂಗಳುಗಳಿಗೊಮ್ಮೆ ಸಭೆ ಸೇರತಕ್ಕದ್ದು ಮತ್ತು ನಿಯಮಿಸಬಹುದಾದಂಥ ರೀತಿಯಲ್ಲಿ ಕಾರ್ಯ ಕಲಾಪಗಳನ್ನು ನಡೆಸತಕ್ಕದ್ದು.

ಮರಗಳ ಪ್ರಾಧಿಕಾರದ ಒಟ್ಟು ಸದಸ್ಯರಲ್ಲಿ ಮೂರನೇ ಒಂದರಷ್ಟು ಭಾಗದ ಸದಸ್ಯರು ಸಭೆಯ ಕೋರಂ ಆಗಿರತಕ್ಕದ್ದು.

## ಅಧ್ಯಾಯ –□III

## ಅಧಿಕಾರಿಗಳು ಮತ್ತು ನೌಕರರು

5. **ಮರಗಳ ಅಧಿಕಾರಿಯ ನೇಮಕಾತಿ.–** (1) [1][ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯು][1] (ಸಾಮಾನ್ಯ) ಈ ಅಧಿನಿಯಮದ ಉದ್ದೇಶಕ್ಕಾಗಿ (2)ನೇ ಉಪ–ಪ್ರಕರಣಕ್ಕೊಳಪಟ್ಟು, ಪ್ರತಿಯೊಂದು ನಗರ ಪ್ರದೇಶ ಮತ್ತು ಗ್ರಾಮೀಣ ಪ್ರದೇಶಕ್ಕೆ ಒಬ್ಬ ಅಥವಾ ಹೆಚ್ಚು ಅರಣ್ಯಾಧಿಕಾರಿಗಳನ್ನು ಮರಗಳ ಅಧಿಕಾರಿಗಳನ್ನಾಗಿ ನೇಮಕ ಮಾಡಬಹುದು.

1. 1998ರ ಅಧಿನಿಯಮ 12ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಅಂಥ ಮರಗಳ ಅಧಿಕಾರಿಯು,–

(i) [1][ದೊಡ್ಡ ನಗರ ಪ್ರದೇಶ][1] ವನ್ನು ಒಳಗೊಂಡಿರುವ ಒಂದು ನಗರ ಪ್ರದೇಶದಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅಧಿಕಾರಿಯಾಗಿರತಕ್ಕದ್ದು;

1. 1998ರ ಅಧಿನಿಯಮ 12ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ii) [1][ಸಣ್ಣ ನಗರ ಪ್ರದೇಶ ಅಥವಾ ಮಧ್ಯಮ ನಗರ ಪ್ರದೇಶ][1] ವನ್ನು ಒಳಗೊಂಡಿರುವ ಒಂದು ನಗರ ಪ್ರದೇಶದಲ್ಲಿ ವಲಯ ಅರಣ್ಯಾಧಿಕಾರಿಯ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅಧಿಕಾರಿಯಾಗಿರತಕ್ಕದ್ದು;

1. 1998ರ ಅಧಿನಿಯಮ 12ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(iii) ಅನುಸೂಚಿ–II ರಲ್ಲಿ ನಿರ್ದಿಷ್ಟಪಡಿಸಿರುವ ವಿಧದ ಒಂದು ಗ್ರಾಮೀಣ ಪ್ರದೇಶದಲ್ಲಿ, ವಲಯ ಅರಣ್ಯಾಧಿಕಾರಿಯ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅಧಿಕಾರಿಯಾಗಿರತಕ್ಕದ್ದು;

(iv) ಅನುಸೂಚಿ I ರಲ್ಲಿ ನಿರ್ದಿಷ್ಟಪಡಿಸಿರುವ ವಿಧದ ಒಂದು ಗ್ರಾಮೀಣ ಪ್ರದೇಶದಲ್ಲಿ, ವಿಭಾಗೀಯ ಅರಣ್ಯಾಧಿಕಾರಿಯ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅಧಿಕಾರಿಯಾಗಿರತಕ್ಕದ್ದು;

6. **ಇತರ ಅಧಿಕಾರಿಗಳ ನೇಮಕಾತಿ.–** [1][ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯು][1] (ಸಾಮಾನ್ಯ) ಮರಗಳ ಅಧಿಕಾರಿಗೆ ನೆರವಾಗಲು ಅಗತ್ಯವೆಂದು ಪರಿಗಣಿಸಬಹುದಾದಷ್ಟು ಇತರ ಅಧಿಕಾರಿಗಳನ್ನು ಮತ್ತು ನೌಕರರನ್ನು ಕಾಲಕಾಲಕ್ಕೆ ನೇಮಕಮಾಡಬಹುದು, ಅವರು ಮರಗಳ ಅಧಿಕಾರಿಗೆ ಅಧೀನರಾಗಿರತಕ್ಕದ್ದು.

1. 1998ರ ಅಧಿನಿಯಮ 12ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

## ಅಧ್ಯಾಯ – IV

## ಮರಗಳ ಪ್ರಾಧಿಕಾರದ ಕರ್ತವ್ಯಗಳು

**7. ಮರಗಳ ಪ್ರಾಧಿಕಾರದ ಕರ್ತವ್ಯಗಳು.–** ಸಂಬಂಧಪಟ್ಟ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಮರಗಳ ಪ್ರಾಧಿಕಾರವು, ರಾಜ್ಯ ಸರ್ಕಾರದ ಯಾವುದೇ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೊಳಪಟ್ಟು,–

(ಎ) ಅದರ ಅಧಿಕಾರ ವ್ಯಾಪ್ತಿಯೊಳಗೆ ಇರುವ ಎಲ್ಲ ಮರಗಳನ್ನು ಸಂರಕ್ಷಣೆ ಮಾಡುವ;

(ಬಿ) ಈಗಿರುವ ಮರಗಳ ಗಣತಿ ನಡೆಸುವುದು ಮತ್ತು ಅವಶ್ಯವೆಂದು ಪರಿಗಣಿಸಿದಾಗಲೆಲ್ಲಾ, ಎಲ್ಲಾ ಮಾಲೀಕರಿಂದ ಅಥವಾ ಅಧಿಭೋಗದಾರರಿಂದ ಅವರ ಜಮೀನುಗಳಲ್ಲಿ ಇರುವ ಮರಗಳ ಸಂಖ್ಯೆಯ ಬಗ್ಗೆ ಘೋಷಣೆಗಳನ್ನು ಪಡೆದುಕೊಳ್ಳುವ;

(ಸಿ) ಪ್ರತಿಯೊಂದು ಸ್ಥಳವು, ಪ್ರತಿಯೊಂದು ವಿಧದ ಜಮೀನು ಮತ್ತು ಆವರಣಗಳು ಹೊಂದಿರತಕ್ಕ ಮರಗಳ ಸಂಖ್ಯೆಯನ್ನು ಮತ್ತು ತರಹೆಯನ್ನು ಮತ್ತು ಗ್ರಾಮೀಣ ಪ್ರದೇಶಗಳ ಸಂದರ್ಭದಲ್ಲಿ ಪ್ರತಿ ಹೆಕ್ಟೇರಿಗೆ ಕನಿಷ್ಠ ಐದು ಮರಗಳನ್ನು ನೆಡುವುದಕ್ಕೊಳಪಟ್ಟು ಗುಣಮಟ್ಟವನ್ನು ನಿರ್ದಿಷ್ಟಪಡಿಸುವ;

(ಡಿ) ನರ್ಸರಿಗಳ ಅಭಿವೃದ್ಧಿ ಮತ್ತು ನಿರ್ವಹಣೆ, ಹೊಸ ಮರಗಳನ್ನು ನೆಡಲು ಬಯಸುವ ಅಥವಾ ನೆಡಲು ಅಗತ್ಯಪಡಿಸಲಾಗಿರುವ ಅಥವಾ ಬಿದ್ದುಹೋಗಿರುವ ಮರಕ್ಕೆ ಬದಲಾಗಿ ಇನ್ನೊಂದು ಮರವನ್ನು ನೆಡುವ ವ್ಯಕ್ತಿಗಳಿಗೆ ಬಿತ್ತನೆ ಬೀಜಗಳನ್ನು, ಸಸಿಗಳನ್ನು ಮತ್ತು ಮರಗಳನ್ನು ಸರಬರಾಜು ಮಾಡುವ;

(ಇ) ಹೊಸ ರಸ್ತೆಗಳ ನಿರ್ಮಾಣದಿಂದ ಅಥವಾ ಈಗಿರುವ ರಸ್ತೆಗಳನ್ನು ಅಗಲಗೊಳಿಸುವುದರಿಂದ ಅಥವಾ ರಸ್ತೆಗಳ ಉದ್ದಕ್ಕೂ ಹಾಕಿರುವ ಆದರೆ ಬೆಳೆಯಲು ವಿಫಲವಾದ ಮರಗಳ ಬದಲಿಗೆ ಬೇರೆ ಮರಗಳನ್ನು ನೆಡುವುದಕ್ಕೆ ಅಥವಾ ಜೀವ ಮತ್ತು ಸ್ವತ್ತಿಗೆ ಉಂಟಾಗುವ ಅಪಾಯದಿಂದ ರಕ್ಷಿಸುವುದಕ್ಕೆ ಅಗತ್ಯವಾಗಿರುವ ಮರಗಳನ್ನು ನೆಡುವ ಮತ್ತು ಸ್ಥಳಾಂತರಿಸಿ ನೆಡುವ;

(ಎಫ್) ಈ ಅಧಿನಿಯಮದ ಉದ್ದೇಶಗಳಿಗಾಗಿ ಪ್ರಾತ್ಯಕ್ಷಿಕೆ ಮತ್ತು ವಿಸ್ತರಣಾ ಸೇವೆಗಳನ್ನು ಸಂಘಟಿಸಲು ಮತ್ತು ಮರಗಳನ್ನು ನೆಡುವುದಕ್ಕೆ ಮತ್ತು ಸಂರಕ್ಷಿಸುವುದಕ್ಕೆ ಸಂಬಂಧಿಸಿದಂತೆ ಖಾಸಗಿ ಮತ್ತು ಸಾರ್ವಜನಿಕ ಸಂಸ್ಥೆಗಳಿಗೆ ನೆರವು ನೀಡುವ;

(ಜಿ) ರಸ್ತೆಗಳ ಮೇಲೆ, ಸಾರ್ವಜನಿಕ ಉದ್ಯಾನವನಗಳಲ್ಲಿ ಮತ್ತು ತೋಟಗಳಲ್ಲಿ ಮತ್ತು ನದಿಗಳು ಅಥವಾ ಸರೋವರಗಳ ದಡದಲ್ಲಿ ಅಥವಾ ಸಮುದ್ರ ತೀರಗಳಲ್ಲಿ, ನಿಯಮಿಸಲಾದ ಪ್ರಮಾಣಗಳಿಗೆ ಅನುಸಾರವಾಗಿ ಅವಶ್ಯವೆಂದು ಪರಿಗಣಿಸಬಹುದಾದಷ್ಟು ಸಂಖ್ಯೆಯ ಮರಗಳನ್ನು ನೆಡುವ ಮತ್ತು ಕಾಪಾಡಿಕೊಂಡು ಬರುವ; ಮತ್ತು

(ಎಚ್) ಅಧಿನಿಯಮದ ಉದ್ದೇಶಗಳನ್ನು ಸಾಧಿಸಲು ರಾಜ್ಯ ಸರ್ಕಾರವು ಕಾಲಕಾಲಕ್ಕೆ ನಿರ್ದೇಶಿಸಬಹುದಾದಂಥ ಯೋಜನೆಗಳನ್ನು ಅಥವಾ ಕ್ರಮಗಳನ್ನು ಕೈಗೊಳ್ಳುವ

– ಜವಾಬ್ದಾರಿ ಹೊಂದಿರತಕ್ಕದ್ದು.

## ಅಧ್ಯಾಯ - V

## ಮರಗಳನ್ನು ಕಡಿಯುವುದರ ಬಗ್ಗೆ ನಿರ್ಬಂಧ ಮತ್ತು ಮರಗಳ ಸಂರಕ್ಷಣೆಯ ಹೊಣೆಗಾರಿಕೆ

**8. ಮರಗಳನ್ನು ಕಡಿಯುವುದರ ಮೇಲೆ ನಿರ್ಬಂಧ.–** (1) ಗೊತ್ತುಪಡಿಸಿದ ದಿನದಂದು ಮತ್ತು ಆ ದಿನದಿಂದ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ರೂಢಿ, ಆಚರಣೆ, ಕರಾರು ಅಥವಾ ಕಾನೂನು ಏನೇ ಇದ್ದರೂ, ಯಾರೇ ವ್ಯಕ್ತಿಯು, ಮರಗಳ ಅಧಿಕಾರಿಯ ಪೂರ್ವ ಅನುಮತಿ ಪಡೆದ ಹೊರತು, ತನ್ನ ಮಾಲೀಕತ್ವದಲ್ಲಿ ಅಥವಾ ಅಧಿಭೋಗದಲ್ಲಿ ಅಥವಾ ಅನ್ಯಥಾ ಇರುವ ಯಾವುದೇ ಜಮೀನಿನಲ್ಲಿ ಯಾವುದೇ ಮರವನ್ನು ಕಡಿಯತಕ್ಕದ್ದಲ್ಲ ಅಥವಾ ಕಡಿಯುವಂತೆ ಮಾಡತಕ್ಕದ್ದಲ್ಲ:

[1][ಪರಂತು, ಮರ ಕಡಿಯುವುದರಲ್ಲಿ, ರಬ್ಬರ್ ಅಥವಾ ಚಹ ಸಾಗುವಳಿಗೆ ಅಥವಾ ಸಾಗುವಳಿಯ ವಿಸ್ತರಣೆಗೆ ಉದ್ದೇಶಿಸಲಾದ ಪ್ರದೇಶಗಳಲ್ಲಿರುವ ಎಲ್ಲ ಮರಗಳನ್ನು ಕಡಿಯುವುದು ಒಳಗೊಂಡಿದ್ದರೆ, ಮರಗಳನ್ನು ಕಡಿಯಲು ಈ ಪ್ರಕರಣದ ಮೇರೆಗೆ ಯಾವುದೇ ಅನುಮತಿಯನ್ನು ನೀಡತಕ್ಕದ್ದಲ್ಲ.][1]

1. 1998ರ ಅಧಿನಿಯಮ 12ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಮರವನ್ನು ಕಡಿಯಲು ಇಚ್ಛಿಸುವ ಯಾರೇ ವ್ಯಕ್ತಿಯು, ಆ ಸಂಬಂಧದಲ್ಲಿ ಅನುಮತಿಗಾಗಿ ಸಂಬಂಧಪಟ್ಟ ಮರಗಳ ಅಧಿಕಾರಿಗೆ ಲಿಖಿತದಲ್ಲಿ ಅರ್ಜಿ ಸಲ್ಲಿಸತಕ್ಕದ್ದು. ಅರ್ಜಿಯ ಜೊತೆ ನಿವೇಶನ ಅಥವಾ ಸರ್ವೆ ನಂಬರುಗಳು, ಕಡಿಯಲು ಕೋರಲಾದ ಮರಗಳ ಸಂಖ್ಯೆ, ತರಹೆ ಮತ್ತು ಸುತ್ತಳತೆ ಇವುಗಳನ್ನು ಸ್ಪಷ್ಟವಾಗಿ ನಿರ್ದಿಷ್ಟಪಡಿಸಿ ನಿವೇಶನ ನಕ್ಷೆ ಅಥವಾ ಮೋಜಣಿ ನಕ್ಷೆಯನ್ನು ಲಗತ್ತಿಸಿ ಮಾಲೀಕ ಅಥವಾ ಅಧಿಭೋಗದಾರನ ಸಹಮತಿ ಪಡೆದು ಮರ ಕಡಿಯಲು ಕಾರಣಗಳನ್ನು ತಿಳಿಸತಕ್ಕದ್ದು.

(3) ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಮರಗಳ ಅಧಿಕಾರಿಯು, ಮರವನ್ನು ಪರಿಶೀಲಿಸಿದ ನಂತರ ಮತ್ತು ತಾನು ಅವಶ್ಯವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, ಅನುಮತಿಯನ್ನು ಪೂರ್ಣವಾಗಿ ಅಥವಾ ಭಾಗಶಃ ಮಂಜೂರು ಮಾಡಬಹುದು ಅಥವಾ ಅನುಮತಿಯನ್ನು ನಿರಾಕರಿಸಬಹುದು:

ಪರಂತು, ಆ ಮರವು,–

(i) ಸತ್ತಿದ್ದರೆ, ರೋಗ ಪೀಡಿತವಾಗಿದ್ದರೆ ಅಥವಾ ಗಾಳಿಗೆ ಬಿದ್ದಿದ್ದರೆ; ಅಥವಾ

(ii) ಅರಣ್ಯ ವಿಜ್ಞಾನದನುಸಾರ ಪೂರ್ಣ ಬೆಳವಣಿಗೆಯಾಗಿದ್ದರೆ; ಅಥವಾ

(iii) ಜೀವಕ್ಕೆ ಅಥವಾ ಸ್ವತ್ತಿಗೆ ಅಪಾಯ ಉಂಟು ಮಾಡುವಂತಿದ್ದರೆ; ಅಥವಾ

(iv) ಸಂಚಾರಕ್ಕೆ ಅಡ್ಡಿಯುಂಟು ಮಾಡುತ್ತಿದ್ದರೆ; ಅಥವಾ

(v) ಬೆಂಕಿ, ಸಿಡಿಲು, ಮಳೆ ಅಥವಾ ಇತರ ನೈಸರ್ಗಿಕ ಕಾರಣಗಳಿಂದ ಸಾಕಷ್ಟು ಹಾನಿಗೊಳಗಾಗಿದ್ದರೆ; ಅಥವಾ

[1][(vi) IIನೇ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಪ್ರದೇಶಗಳಲ್ಲಿ ಸಾಗುವಳಿಗೆ, ಸಾಗುವಳಿಯ ವಿಸ್ತರಣೆಗೆ ಅಥವಾ ಬೆಳೆ ಸಾಗುವಳಿಯಲ್ಲಿನ ಬದಲಾವಣೆಗಾಗಿ ಅದನ್ನು ತೆಗೆಯಬೇಕಾಗಿದ್ದರೆ (ಹಾಗೆ ತೆಗೆಯುವುದು– ಸಾಗುವಳಿ, ಸಾಗುವಳಿಯ ವಿಸ್ತರಣೆ ಅಥವಾ ಬೆಳೆ ಸಾಗುವಳಿಯ ಬದಲಾವಣೆಗೆ ಉದ್ದೇಶಿಸಲಾದ ಪ್ರದೇಶಗಳಲ್ಲಿ ಎಲ್ಲ ಮರಗಳನ್ನು ಕಡಿಯುವುದನ್ನು ಒಳಗೊಂಡಿಲ್ಲದಿದ್ದ ಹೊರತು) ಅಥವಾ ಅರ್ಜಿದಾರನ ಸದ್ಭಾವಿಕ ಬಳಕೆಗಾಗಿ ಅಗತ್ಯವಿದ್ದರೆ][1]

– ಅನುಮತಿಯನ್ನು ನಿರಾಕರಿಸತಕ್ಕದ್ದಲ್ಲ.

1. 1998ರ ಅಧಿನಿಯಮ 12ರ ಮೂಲಕ 11.05.1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(4) ಮರಗಳ ಅಧಿಕಾರಿಯು, ಈ ಪ್ರಕರಣದ ಅಡಿಯಲ್ಲಿ ಸ್ವೀಕರಿಸಲಾದ ಅರ್ಜಿಯನ್ನು, ಅದನ್ನು ಸ್ವೀಕರಿಸಿದ ದಿನಾಂಕದಿಂದ ಮೂರು ತಿಂಗಳ ಅವಧಿಯೊಳಗೆ ವಿಲೆ ಮಾಡಲು ಸಾಧ್ಯವಿರುವ ಎಲ್ಲ ಪ್ರಯತ್ನವನ್ನು ಮಾಡತಕ್ಕದ್ದು:

ಪರಂತು, ಈ ಉಪ ಪ್ರಕರಣದ ಅಡಿಯಲ್ಲಿ ಮೂರು ತಿಂಗಳ ಅವಧಿಯನ್ನು ಲೆಕ್ಕ ಹಾಕುವಾಗ,–

(ಎ) ರೆವೆನ್ಯೂ ಪ್ರಾಧಿಕಾರಿಗಳ ಅಭಿಪ್ರಾಯವನ್ನು;

(ಬಿ) ಭೂ ದಾಖಲೆಗಳ ಸಹಾಯಕ ನಿರ್ದೇಶಕರಿಂದ ವರದಿಯನ್ನು;

(ಸಿ) ಕಡಿಯಲು ಉದ್ದೇಶಿಸಿದ ಮರಗಳ ಅಳತೆಗಳ ಪಟ್ಟಿಯನ್ನು; ಅಥವಾ

(ಡಿ) ನಿಯಮಿಸಬಹುದಾದ ಯಾವುದೇ ಇತರ ಸೂಕ್ತ ಮಾಹಿತಿಯನ್ನು

– ಪಡೆಯಲು ಅಗತ್ಯವಿರುವಷ್ಟು ಕಾಲವನ್ನು ಹೊರತುಪಡಿಸತಕ್ಕದ್ದು.][1]

1. 1998ರ ಅಧಿನಿಯಮ 12ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(5) ಮರ ಕಡಿಯಲು ಅನುಮತಿ ನೀಡಲಾಗಿರುವಲ್ಲಿ, ಮರಗಳ ಅಧಿಕಾರಿಯು, ಮರವನ್ನು ಕಡಿಯುವ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಅಥವಾ ಮರಗಳ ಅಧಿಕಾರಿಯು ಅನುಮತಿಸಬಹುದಾದಂಥ ವಿಸ್ತೃತ ಅವಧಿಯೊಳಗೆ, ಅರ್ಜಿದಾರನು, ಅದೇ ಸ್ಥಳದಲ್ಲಿ ಅಥವಾ ಇತರ ಸೂಕ್ತ ಸ್ಥಳದಲ್ಲಿ ಇನ್ನೊಂದು ಮರವನ್ನು ಅಥವಾ ಅದೇ ಜಾತಿಯ ಅಥವಾ ಇತರ ಯಾವುದೇ ಸೂಕ್ತ ತಳಿಯ ಮರಗಳನ್ನು ನೆಡುವ ಷರತ್ತಿಗೊಳಪಟ್ಟು ಆ ಅನುಮತಿಯನ್ನು ನೀಡಬಹುದು.

(6) (1)ರಿಂದ (5)ರ ವರೆಗಿನ ಉಪ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ಆದರೆ, ನಿಯಮಿಸಬಹುದಾದಂಥ ಷರತ್ತುಗಳು ಮತ್ತು ನಿರ್ಬಂಧಗಳಿಗೊಳಪಟ್ಟು, ಒಂದು ಕುಟುಂಬದ ಸದ್ಭಾವಿಕ ಗೃಹ ಬಳಕೆಗಾಗಿ, ಅಂಥ ಕುಟುಂಬದ ಒಬ್ಬ ಸದಸ್ಯನು ಅಥವಾ ಹೆಚ್ಚು ಸದಸ್ಯರು, ಒಂದು ಕ್ಯಾಲೆಂಡರ್ ವರ್ಷದಲ್ಲಿ ಒಟ್ಟು [1][2.8 ಘನ ಮೀಟರುಗಳಿಗಿಂತ ಹೆಚ್ಚಿಲ್ಲದ ಚೌಬೀನೆ, [2][ಐವತ್ತು ಕಂಬಗಳು ಮತ್ತು ಬಿದಿರು][2] ಮತ್ತು ಐದು ಟನ್‌ಗಳಷ್ಟು ಸೌದೆ][1] ಸಿಗುವಷ್ಟು ಸಂಖ್ಯೆಯ ಮರಗಳನ್ನು ಕಡಿಯಲು ಅನ್ಯಥಾ ಹಕ್ಕುಳ್ಳವರಾಗಿದ್ದರೆ ಅವರು ಹಾಗೆ ಕಡಿಯಬಹುದು.

1. 1977ರ ಅಧಿನಿಯಮ 21ರ ಮೂಲಕ 29.07.1977ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1998ರ ಅಧಿನಿಯಮ 12ರ ಮೂಲಕ 11.05.1998ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(7) ಈ ಪ್ರಕರಣದಲ್ಲಿರುವುದು ಯಾವುದೂ, [2][ಕ್ಯಾಸರೀನ, ತೆಂಗು, ಈರಿತ್ರಿನ, ನೀಲಗಿರಿ, ಗ್ಲೈರೆಸಿಡಿಯ, ಹೊಪಿಯಾ ವೈಟಿನಾ, ಪ್ರಾಸಿಪಿಸ್, ರಬ್ಬರ್, ಸೆಸ್ಬನಿಯ, ಸಿಲ್ವರ್ ಓಕ್ ಮತ್ತು ಸುಬಾಬುಲ್ ಮರಗಳನ್ನು][2] ಕಡಿಯುವುದಕ್ಕೆ ಅನ್ವಯವಾಗತಕ್ಕದ್ದಲ್ಲ.][1]

1. 1977ರ ಅಧಿನಿಯಮ 21ರ ಮೂಲಕ 29.07.1977ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1987ರ ಅಧಿನಿಯಮ 39ರ ಮೂಲಕ 1.12.1987ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][8ಎ. **8ನೇ ಪ್ರಕರಣದ ಅಡಿ ಮಂಜೂರಾದ ಅನುಮತಿಯನ್ನು ರದ್ದುಗೊಳಿಸುವುದು ಅಥವಾ ಅಮಾನತುಗೊಳಿಸುವುದು.–** ಮರಗಳ ಅಧಿಕಾರಿಯು, ಈ ಮುಂದೆ ನಿರ್ದಿಷ್ಟಪಡಿಸಿದ ಯಾವುವೇ ಕಾರಣಗಳಿಗಾಗಿ 8ನೇ ಪ್ರಕರಣದ ಅಡಿಯಲ್ಲಿ ಮಂಜೂರಾದ ಅನುಮತಿಯನ್ನು ರದ್ದುಗೊಳಿಸುವುದಕ್ಕೆ ಅಥವಾ ಅಮಾನತುಗೊಳಿಸುವುದಕ್ಕೆ ಮೊದಲು ಮಂಜೂರಾತಿ ಪಡೆದವನಿಗೆ ಅಹವಾಲು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟು ಮತ್ತು ಅದರ ಕಾರಣಗಳನ್ನು ದಾಖಲು ಮಾಡಿಕೊಂಡು ಹಾಗೆ ರದ್ದುಗೊಳಿಸಬಹುದು ಅಥವಾ ಅಮಾನತುಗೊಳಿಸಬಹುದು, ಎಂದರೆ:–

(ಎ) ಅನುಮತಿ ಪಡೆಯುವುದಕ್ಕಾಗಿ ಸುಳ್ಳು ಅಥವಾ ತಪ್ಪು ಮಾಹಿತಿಯನ್ನು ಒದಗಿಸಿರುವುದು;

(ಬಿ) ಹಕ್ಕಿನ ಸಂಬಂಧದಲ್ಲಿ ದೋಷಗಳು ಪತ್ತೆಯಾಗುವುದು;

(ಸಿ) ಮರ ಕಡಿಯಲು ನೀಡಿರುವ ಅನುಮತಿಯ ದುರ್ಬಳಕೆ;

(ಡಿ) ಮರ ಕಡಿಯಲು ನೀಡಿರುವ ಅನುಮತಿಯ ಷರತ್ತುಗಳನ್ನು ಪೂರೈಸದಿರುವುದು;

(ಇ) ಈ ಅಧಿನಿಯಮದ ಉಪಬಂಧಗಳು ಅಥವಾ ಅದರ ಮೇರೆಗೆ ಮಾಡಲಾದ ನಿಯಮಗಳು ಅಥವಾ ಆದೇಶಗಳ ಯಾವುದೇ ಉಲ್ಲಂಘನೆ;

(ಎಫ್) ಅನುಮತಿ ನೀಡಿಲ್ಲದ ಮರಗಳನ್ನು ಕಡಿಯುವುದು;

(ಜಿ) ಅನುಮತಿ ಪಡೆದವನು ಮತ್ತು ಇತರರ ನಡುವೆ ವಿವಾದ ಇರುವುದು.][1]

1. 1998ರ ಅಧಿನಿಯಮ 12ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**9. ಸಾಕಷ್ಟು ಸಂಖ್ಯೆಯ ಮರಗಳನ್ನು ನೆಡುವುದು.–** (1) ಭೂಮಿಯ ಪ್ರತಿಯೊಬ್ಬ ಮಾಲೀಕನು ಅಥವಾ ಅಧಿಭೋಗದಾರನು, ಗೊತ್ತುಪಡಿಸಲಾದ ದಿನದಿಂದ ಐದು ವರ್ಷಗಳ ಅವಧಿಯೊಳಗೆ ಅಥವಾ ಮರಗಳ ಅಧಿಕಾರಿಯು ನಿರ್ದಿಷ್ಟಪಡಿಸಬಹುದಾದಂಥ ವಿಸ್ತೃತ ಅವಧಿಯೊಳಗೆ 7ನೇ ಪ್ರಕರಣದ (ಸಿ) ಖಂಡದ ಅಡಿಯಲ್ಲಿ ಸದರಿ ಮರಗಳ ಪ್ರಾಧಿಕಾರವು ನಿಯಮಿಸಿದ ಗುಣಮಟ್ಟಗಳಿಗನುಸಾರವಾಗಿರುವಂತೆ ಮರಗಳನ್ನು ನೆಡತಕ್ಕದ್ದು.

(2) ಯಾವುದೇ ಜಮೀನಿನಲ್ಲಿರುವ ಮರಗಳ ಸಂಖ್ಯೆಯು, (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ಗುಣಮಟ್ಟಗಳಿಗನುಸಾರವಾಗಿ ಸಾಕಷ್ಟಿಲ್ಲವೆಂದು ಮರಗಳ ಅಧಿಕಾರಿಯು ಅಭಿಪ್ರಾಯಪಟ್ಟರೆ, ಮರಗಳ ಅಧಿಕಾರಿಯು, ಆದೇಶದ ಮೂಲಕ, ಜಮೀನಿನ ಮಾಲೀಕ ಅಥವಾ ಅಧಿಭೋಗದಾರನಿಗೆ ಮನವಿ ಸಲ್ಲಿಸಲು ಸೂಕ್ತ ಅವಕಾಶ ನೀಡಿ, ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಷ್ಟು ಮರಗಳನ್ನು ಅಥವಾ ಸಂದರ್ಭಾನುಸಾರ ಹೆಚ್ಚುವರಿ ಮರಗಳನ್ನು ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸ್ಥಳಗಳಲ್ಲಿ ನೆಡುವಂತೆ ಅಗತ್ಯಪಡಿಸಬಹುದು.

(3) ಜಮೀನಿನ ಮಾಲೀಕನು ಅಥವಾ ಅಧಿಭೋಗದಾರನು, ಅಂಥ ಆದೇಶವನ್ನು ಸ್ವೀಕರಿಸಿದಂದಿನಿಂದ, ಮೂವತ್ತು ದಿನಗಳೊಳಗಾಗಿ ಅಥವಾ ಈ ಸಂಬಂಧದಲ್ಲಿ ಮರಗಳ ಅಧಿಕಾರಿಯು ಅನುಮತಿಸಬಹುದಾದಂಥ ವಿಸ್ತರಿಸಿದ ಸಮಯದೊಳಗೆ ಅಂಥ ಆದೇಶಗಳನ್ನು ಪಾಲಿಸತಕ್ಕದ್ದು.

**10. ಬಿದ್ದ ಅಥವಾ ನಾಶವಾದ ಮರಗಳ ಬದಲಿಗೆ ಮರಗಳನ್ನು ನೆಡುವುದು.–** (1) ಯಾವುದೇ ಮರವು ಬಿದ್ದಿದ್ದಲ್ಲಿ ಅಥವಾ ಗಾಳಿ, ಬೆಂಕಿ, ಸಿಡಿಲು, ಧಾರಾಕಾರ ಮಳೆ ಅಥವಾ ಅಂಥ ಇತರ ನೈಸರ್ಗಿಕ ಕಾರಣಗಳಿಂದ ನಾಶವಾಗಿದ್ದರೆ, ಮರಗಳ ಅಧಿಕಾರಿಯು, ತಾನಾಗಿಯೇ ಅಥವಾ ಅವನಿಗೆ ಮಾಹಿತಿ ತಿಳಿದ ಮೇಲೆ, ಅವನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, ಆದೇಶದ ಮೂಲಕ, ಹಾಗೆ ಬಿದ್ದ ಅಥವಾ ನಾಶಹೊಂದಿದ ಮರದ ಬದಲಿಗೆ ಅದೇ ತಳಿಯ ಅಥವಾ ಇತರ ತಳಿಯ ಮರ ಅಥವಾ ಮರಗಳನ್ನು ಅದೇ ಸ್ಥಳದಲ್ಲಿ ಅಥವಾ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದ ಇತರ ಸೂಕ್ತ ಸ್ಥಳದಲ್ಲಿ ನೆಡುವಂತೆ ಅಂಥ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು ಅಗತ್ಯಪಡಿಸಬಹುದು.

(2) ಜಮೀನಿನ ಮಾಲೀಕನು ಅಥವಾ ಅಧಿಭೋಗದಾರನು, ಅಂಥ ಆದೇಶಗಳನ್ನು ಸ್ವೀಕರಿಸಿದಂದಿನಿಂದ ಮೂವತ್ತು ದಿನಗಳೊಳಗಾಗಿ ಅಥವಾ ಮರಗಳ ಅಧಿಕಾರಿಯು ಅನುಮತಿಸಬಹುದಾದಂಥ ವಿಸ್ತರಿಸಿದ ಸಮಯದೊಳಗೆ ಅದನ್ನು ಪಾಲಿಸತಕ್ಕದ್ದು.

**11. ಮರಗಳ ಸಂರಕ್ಷಣೆ.–** 12ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು, 8, 9 ಅಥವಾ 10ನೇ ಪ್ರಕರಣಗಳ ಮೇರೆಗೆ ಮರವನ್ನು ಅಥವಾ ಮರಗಳನ್ನು ನೆಡಲು, ಆದೇಶದ ಮೂಲಕ ಅಗತ್ಯಪಡಿಸಲಾಗಿರುವ ಜಮೀನಿನ ಮಾಲೀಕ ಅಥವಾ ಅಧಿಭೋಗದಾರನು ಮರಗಳು ಸರಿಯಾಗಿ ಬೆಳೆಯುತ್ತಿವೆ ಮತ್ತು ಅವುಗಳನ್ನು ಚೆನ್ನಾಗಿ ಸಂರಕ್ಷಿಸಲಾಗುತ್ತಿದೆ ಎಂಬುದನ್ನು ಸುನಿಶ್ಚಿತ ಪಡಿಸಿಕೊಳ್ಳುವುದು ಅವನ ಕರ್ತವ್ಯವಾಗಿರತಕ್ಕದ್ದು.

12. **ಮರಗಳನ್ನು ದತ್ತಕ ತೆಗೆದುಕೊಳ್ಳುವುದು.–** ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಮರಗಳ ಪ್ರಾಧಿಕಾರಿಯು, ಈ ಸಂಬಂಧದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು, ಅವುಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿಗೆ ಯಾವುದೇ ಮರವನ್ನು ದತ್ತಕ ತೆಗೆದುಕೊಳ್ಳಲು ಯಾರೇ ವ್ಯಕ್ತಿ, ನಿಗಮಿತ ನಿಕಾಯ ಅಥವಾ ಸಂಸ್ಥೆಗೆ ಅನುಮತಿ ನೀಡಬಹುದು ಮತ್ತು ಅಂಥ ಅವಧಿಯಲ್ಲಿ, ಸದರಿ ವ್ಯಕ್ತಿ, ನಿಗಮಿತ ನಿಕಾಯ ಅಥವಾ ಸಂಸ್ಥೆಯು ಸದರಿ ಮರದ ನಿರ್ವಹಣೆಗೆ ಮತ್ತು ಸಂರಕ್ಷಣೆಗೆ ಜವಾಬ್ದಾರವಾಗಿರತಕ್ಕದ್ದು.

13. **ಮರಗಳನ್ನು ನೆಡುವುದಕ್ಕಾಗಿ ನೀಡಿದ ಆದೇಶಗಳನ್ನು ಪಾಲಿಸಲು ತಪ್ಪಿದಲ್ಲಿ ವೆಚ್ಚದ ವಸೂಲಿ.–** ಮಾಲೀಕನು ಅಥವಾ ಅಧಿಭೋಗದಾರನು, 8, 9 ಅಥವಾ 10ನೇ ಪ್ರಕರಣಗಳ ಅಡಿಯಲ್ಲಿ ಮರಗಳ ಅಧಿಕಾರಿಯು ಮಾಡಿದ ಆದೇಶವನ್ನು ಪಾಲಿಸಲು ತಪ್ಪಿದರೆ, ಮರಗಳ ಅಧಿಕಾರಿಯು, ಅಂಥ ಮಾಲೀಕ ಅಥವಾ ಅಧಿಭೋಗದಾರನಿಗೆ, ಮನವಿ ಸಲ್ಲಿಸಲು ಒಂದು ಸೂಕ್ತ ಅವಕಾಶ ನೀಡಿದ ತರುವಾಯ ಮತ್ತು ಈ ಅಧಿನಿಯಮದ ಅಡಿಯಲ್ಲಿ ತಪ್ಪಿತಸ್ಥನ ವಿರುದ್ಧ ತೆಗೆದುಕೊಳ್ಳಬಹುದಾದ ಯಾವುದೇ ಇತರ ಕ್ರಮಕ್ಕೆ ಬಾಧಕವಾಗದಂತೆ ಸ್ವತ: ಅವಶ್ಯ ಕ್ರಮ ಕೈಗೊಳ್ಳಬಹುದು ಮತ್ತು ಅದಕ್ಕಾಗಿ ವಹಿಸಲಾದ ವೆಚ್ಚವನ್ನು ಸಂದರ್ಭಾನುಸಾರ, ಮಾಲೀಕನಿಂದ ಅಥವಾ ಅಧಿಭೋಗದಾರನಿಂದ ವಸೂಲಿ ಮಾಡಬಹುದು. ಅಂಥ ವೆಚ್ಚವನ್ನು ಮರಗಳ ಅಧಿಕಾರಿಯು ನಿರ್ದಿಷ್ಟಪಡಿಸಿದ ಅವಧಿಯೊಳಗೆ ಸಂದಾಯ ಮಾಡದಿದ್ದರೆ, ಆ ಮೊಬಲಗು ಹಾಗೂ ಅದರ ಮೇಲೆ ವರ್ಷಕ್ಕೆ ಶೇಕಡಾ ಆರರ ದರದಲ್ಲಿ ಬಡ್ಡಿ ಮತ್ತು ಇತರ ವೆಚ್ಚಗಳು ಯಾವುವಾದರೂ ಇದ್ದರೆ, ಅವುಗಳನ್ನು ಭೂ ಕಂದಾಯದ ಬಾಕಿ ಎಂಬಂತೆ ವಸೂಲಿ ಮಾಡತಕ್ಕದ್ದು.

14. **ಅಪೀಲು.–** (1) 8,[1][8ಎ][1], 9 ಅಥವಾ 10ನೇ ಪ್ರಕರಣದ ಮೇರೆಗೆ ಮರಗಳ ಅಧಿಕಾರಿಯು ಮಾಡಿದ ಆದೇಶದ ವಿರುದ್ಧ ಅಪೀಲನ್ನು ಮರಗಳ ಪ್ರಾಧಿಕಾರಿಗೆ ಸಲ್ಲಿಸತಕ್ಕದ್ದು.

1. 1998ರ ಅಧಿನಿಯಮ 12 ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಜಮೀನಿನ ಮಾಲೀಕ ಅಥವಾ ಅಧಿಭೋಗದಾರನಿಗೆ ನಿರ್ಣಯವನ್ನು ತಿಳಿಯಪಡಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಅಂಥ ಅಪೀಲನ್ನು ದಾಖಲ್ಮಾಡತಕ್ಕದ್ದು ಮತ್ತು ಅದರ ಜೊತೆಗೆ ಒಂದು ನೂರು ರೂಪಾಯಿಗಳ ಶುಲ್ಕವು ಇರತಕ್ಕದ್ದು.

(3) ಮರಗಳ ಪ್ರಾಧಿಕಾರಿಯು ಅಪೀಲುದಾರನಿಗೆ ಅಹವಾಲು ಹೇಳಿಕೊಳ್ಳಲು ಸೂಕ್ತ ಅವಕಾಶ ನೀಡಿದ ತರುವಾಯ ಅಪೀಲಿನ ಬಗ್ಗೆ ತೀರ್ಮಾನ ತೆಗೆದುಕೊಳ್ಳತಕ್ಕದ್ದು. ಮರಗಳ ಪ್ರಾಧಿಕಾರದ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

(4) ಅಪೀಲನ್ನು ಸಕಾಲದಲ್ಲಿ ಸಲ್ಲಿಸಿರುವಲ್ಲಿ, ಮರಗಳ ಅಧಿಕಾರಿಯು ಆ ಆದೇಶದಲ್ಲಿ ನಿರ್ದಿಷ್ಟಪಡಿಸಿದ ತೀರ್ಪಿನ ಪಾಲನೆಯ ಅವಧಿಯನ್ನು ಅಪೀಲುದಾರನ ವಿರುದ್ಧ ಅಪೀಲನ್ನು ನಿರ್ಣಯಿಸಿದ ದಿನಾಂಕದಿಂದ ಪರಿಗಣಿಸತಕ್ಕದ್ದು ಹಾಗೂ ಅಪೀಲನ್ನು ಅಂಗೀಕರಿಸಿದಲ್ಲಿ, (2)ನೇ ಉಪ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಿದ ಶುಲ್ಕವನ್ನು ಅಪೀಲುದಾರನಿಗೆ ಮರುಪಾವತಿ ಮಾಡತಕ್ಕದ್ದು.

(5) ಪ್ರತಿಯೊಂದು ಅಪೀಲಿಗೆ ಸಂಬಂಧಿಸಿದಂತೆ ಮರಗಳ ಪ್ರಾಧಿಕಾರದ ಸದಸ್ಯರಲ್ಲಿ ಮೂರಕ್ಕಿಂತ ಕಡಿಮೆಯಲ್ಲದಷ್ಟು ಸದಸ್ಯರು ವಿಚಾರಣೆ ನಡೆಸತಕ್ಕದ್ದು.

## ಅಧ್ಯಾಯ - VI

## ದಂಡಗಳು ಮತ್ತು ಅವುಗಳ ಕಾರ್ಯವಿಧಾನ

15. **ಸ್ವತ್ತನ್ನು ಜಪ್ತಿ ಮಾಡುವುದು.–** ಯಾವುದೇ ಮರದ ಸಂಬಂಧದಲ್ಲಿ ಈ ಅಧಿನಿಯಮದ ಮೇರೆಗೆ ಒಂದು ಅಪರಾಧವನ್ನು ಮಾಡಲಾಗಿದೆ ಎಂದು ನಂಬಲು ಮರಗಳ ಅಧಿಕಾರಿಗೆ ಕಾರಣವಿದ್ದಲ್ಲಿ, ಸದರಿ ಅಪರಾಧ ಮಾಡಲು ಬಳಸಿದ ಉಪಕರಣಗಳು ಮತ್ತು ಯಾವುವೇ ದೋಣಿಗಳು, ವಾಹನಗಳು ಅಥವಾ ಇತರ ಸಾಗಣೆ ವಾಹನಗಳನ್ನು ಅಥವಾ ಪ್ರಾಣಿಗಳನ್ನು ಮತ್ತು ಮರವನ್ನು ಸಂದರ್ಭಾನುಸಾರ ನೆಲದಿಂದ ಅಥವಾ ಕಾಂಡದಿಂದ ಕತ್ತರಿಸಲಾದ ಅದರ ಭಾಗವನ್ನು ಅವನು ಜಪ್ತಿ ಮಾಡಬಹುದು.

[1][15ಎ. **ತನಿಖೆಯ ವಿಷಯದಲ್ಲಿ ಮರಗಳ ಅಧಿಕಾರಿಯ ಅಧಿಕಾರಗಳು.–** (1) ಯಾರೇ ಮರಗಳ ಅಧಿಕಾರಿಯು, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಪ್ರದೇಶದೊಳಗೆ, 22ನೇ ಪ್ರಕರಣದ ಅಡಿಯಲ್ಲಿನ ಅಪರಾಧಗಳಿಗೆ ಸಂಬಂಧಿಸಿದಂತೆ, 1973 ರ ದಂಡ ಪ್ರಕ್ರಿಯಾ ಸಂಹಿತೆಯ ಉಪಬಂಧಗಳ ಮೂಲಕ, ಪೊಲೀಸ್ ಠಾಣೆಯ ಪ್ರಭಾರದಲ್ಲಿರುವ ಅಧಿಕಾರಿಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಬಹುದು:

ಪರಂತು, ಅಂಥ ಯಾವುದೇ ಅಧಿಕಾರವು, ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ನಿರ್ಬಂಧಗಳು ಮತ್ತು ಮಾರ್ಪಾಟುಗಳು ಯಾವುವಾದರೂ ಇದ್ದರೆ, ಅವುಗಳಿಗೆ ಒಳಪಟ್ಟಿರತಕ್ಕದ್ದು.

(2) ದಂಡಪ್ರಕ್ರಿಯಾ ಸಂಹಿತೆ, 1973ರ 156ನೇ ಪ್ರಕರಣದ ಉದ್ದೇಶಗಳಿಗಾಗಿ (1)ನೇ ಉಪ ಪ್ರಕರಣದ ಅಡಿಯಲ್ಲಿ ಮರಗಳ ಅಧಿಕಾರಿಯು ಅಧಿಕಾರ ಹೊಂದಿರುವಂಥ ಪ್ರದೇಶವನ್ನು ಒಂದು ಪೊಲೀಸು ಠಾಣೆ ಎಂಬುದಾಗಿ ಭಾವಿಸತಕ್ಕದ್ದು ಮತ್ತು ಅಂಥ ಅಧಿಕಾರಿಯನ್ನು ಅಂಥ ಠಾಣೆಯ ಪ್ರಭಾರದಲ್ಲಿರುವ ಅಧಿಕಾರಿ ಎಂದು ಭಾವಿಸತಕ್ಕದ್ದು.

**15ಬಿ. ಮರಗಳ ಅಧಿಕಾರಿಯಿಂದ ವರದಿ.–** 15ಎ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಅಧಿಕಾರ ಹೊಂದಿರುವ ಮರಗಳ ಅಧಿಕಾರಿಯು ಯಾವುದೇ ತನಿಖೆ ನಡೆಸಿದ ತರುವಾಯ ಆರೋಪಿಯ ಮೇಲೆ ಕಾನೂನು ಕ್ರಮ ಜರುಗಿಸುವುದನ್ನು ಸಮರ್ಥಿಸಲು ಸಾಕಷ್ಟು ಸಾಕ್ಷ್ಯವಿದೆಯೆಂದು ಕಂಡುಬಂದಲ್ಲಿ, ತನಿಖಾಧಿಕಾರಿಯು, ಪ್ರಕರಣದ ಬಗ್ಗೆ ವಿಚಾರಣೆ ಅಥವಾ ಅಧಿವಿಚಾರಣೆ ನಡೆಸಲು ಮತ್ತು ಪೊಲೀಸು ವರದಿಗಳ ಮೇಲೆ ಅಪರಾಧವನ್ನು ಅವಗಾಹನೆಗೆ ತೆಗೆದುಕೊಳ್ಳಲು ಅಧಿಕಾರ ವ್ಯಾಪ್ತಿ ಹೊಂದಿರುವ ಮ್ಯಾಜಿಸ್ಟ್ರೇಟನಿಗೆ ಒಂದು ವರದಿಯನ್ನು (1973ರ ದಂಡ ಪ್ರಕ್ರಿಯಾ ಸಂಹಿತೆಯ 190ನೇ ಪ್ರಕರಣದ ಉದ್ದೇಶಗಳಿಗಾಗಿ ಅದನ್ನು ಒಂದು ಪೊಲೀಸ್ ವರದಿ ಎಂದು ಭಾವಿಸತಕ್ಕದ್ದು.) ಸಲ್ಲಿಸತಕ್ಕದ್ದು.][1]

1. 2000ದ ಅಧಿನಿಯಮ 20ರ ಮೂಲಕ 15ಎ ಮತ್ತು 15ಬಿ ಪ್ರಕರಣಗಳನ್ನು 4.10.2000ದಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**16. 15ನೇ ಪ್ರಕರಣದ ಅಡಿಯಲ್ಲಿ ಜಫ್ತಿ ಮಾಡಿರುವ ಸ್ವತ್ತಿನ ಬಿಡುಗಡೆಗೆ ಅಧಿಕಾರ.–** ಮರಗಳ ಅಧಿಕಾರಿಯು, 15ನೇ ಪ್ರಕರಣದ ಅಡಿಯಲ್ಲಿ ಜಫ್ತಿ ಮಾಡಲಾದ ಸ್ವತ್ತುಗಳನ್ನು ಅಗತ್ಯಪಡಿಸಿದಾಗಲೆಲ್ಲ ಹಾಜರುಪಡಿಸುವೆನೆಂದು ಮಾಲೀಕ ಅಥವಾ ಅಧಿಭೋಗದಾರನು ಒಂದು ಬಂಧಪತ್ರವನ್ನು ಬರೆದುಕೊಟ್ಟರೆ, ಅವುಗಳನ್ನು ಬಿಡುಗಡೆ ಮಾಡಬಹುದು.

**17. ವಾರೆಂಟ್ ಇಲ್ಲದೆ ದಸ್ತಗಿರಿ ಮಾಡಲು ಅಧಿಕಾರ.–** (1) ಯಾರೇ ಮರಗಳ ಅಧಿಕಾರಿಯು, ಯಾರೇ ವ್ಯಕ್ತಿಯನ್ನು ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ಅಪರಾಧಕ್ಕೆ ಸಂಬಂಧಪಟ್ಟಿರುವನೆಂದು ಸಕಾರಣವಾಗಿ ಶಂಕಿಸಿದರೆ, ಅಂಥ ವ್ಯಕ್ತಿಯು ತನ್ನ ಹೆಸರು ಮತ್ತು ವಿಳಾಸವನ್ನು ಕೊಡಲು ನಿರಾಕರಿಸಿದರೆ ಅಥವಾ ಮರಗಳ ಅಧಿಕಾರಿಯು ಸುಳ್ಳೆಂದು ನಂಬಲು ಕಾರಣವಿರುವ ಹೆಸರು ಅಥವಾ ವಿಳಾಸವನ್ನು ಕೊಟ್ಟರೆ ಅಥವಾ ಆ ವ್ಯಕ್ತಿಯು ತಲೆ ತಪ್ಪಿಸಿಕೊಳ್ಳುವನೆಂದು ನಂಬಲು ಕಾರಣಗಳಿದ್ದರೆ ಅವನನ್ನು ವಾರೆಂಟ್ ಇಲ್ಲದೆ ದಸ್ತಗಿರಿ ಮಾಡಬಹುದು.

(2) ಈ ಪ್ರಕರಣದ ಮೇರೆಗೆ ದಸ್ತಗಿರಿಯಾದ ಯಾರೇ ವ್ಯಕ್ತಿಗೆ, ಸಾಧ್ಯವಾದಷ್ಟು ಬೇಗನೆ, ಅಂಥ ದಸ್ತಗಿರಿಗೆ ಕಾರಣಗಳನ್ನು ತಿಳಿಸತಕ್ಕದ್ದು ಮತ್ತು ಅವನನ್ನು ಆ ಪ್ರಕರಣದಲ್ಲಿ ಅಧಿಕಾರ ವ್ಯಾಪ್ತಿ ಹೊಂದಿರುವ ಅತ್ಯಂತ ಹತ್ತಿರದ ಮ್ಯಾಜಿಸ್ಟ್ರೇಟರ ಮುಂದೆ, ಅವನನ್ನು ಬಂಧಿಸಿದ ಸ್ಥಳದಿಂದ ಮ್ಯಾಜಿಸ್ಟ್ರೇಟರ ನ್ಯಾಯಾಲಯಕ್ಕೆ ಪ್ರಯಾಣ ಮಾಡಲು ಅವಶ್ಯವಾದ ವೇಳೆಯನ್ನು ಹೊರತುಪಡಿಸಿ, ಅಂಥ ಬಂಧನದ ಇಪ್ಪತ್ತನಾಲ್ಕು ಗಂಟೆಗಳ ಅವಧಿಯ ಒಳಗಾಗಿ ಹಾಜರುಪಡಿಸತಕ್ಕದ್ದು ಮತ್ತು ಅಂಥ ಯಾರೇ ವ್ಯಕ್ತಿಯನ್ನು ಮ್ಯಾಜಿಸ್ಟ್ರೇಟನ ಆದೇಶವಿಲ್ಲದೆ ಸದರಿ ಅವಧಿಯನ್ನು ಮೀರಿ ಅಭಿರಕ್ಷೆಯಲ್ಲಿ ಬಂಧಿಸಿಟ್ಟುಕೊಳ್ಳತಕ್ಕದ್ದಲ್ಲ.

**18. ದಸ್ತಗಿರಿ ಮಾಡಲಾಗಿರುವ ವ್ಯಕ್ತಿಯನ್ನು ಬಿಡುಗಡೆ ಮಾಡಲು ಅಧಿಕಾರ.–** 17ನೇ ಪ್ರಕರಣದ ಉಪಬಂಧಗಳ ಅಡಿಯಲ್ಲಿ ಯಾರೇ ವ್ಯಕ್ತಿಯನ್ನು ದಸ್ತಗಿರಿ ಮಾಡಿದ ಯಾರೇ ಮರಗಳ ಅಧಿಕಾರಿಯು, ಅಂಥ ವ್ಯಕ್ತಿಯನ್ನು ಹಾಜರಾಗುವಂತೆ ಅಗತ್ಯಪಡಿಸಿದರೆ ಮತ್ತು ಅಗತ್ಯಪಡಿಸಿದಾಗಲೆಲ್ಲ ಪ್ರಕರಣದ ಅಧಿಕಾರ ವ್ಯಾಪ್ತಿ ಹೊಂದಿರುವ ಮ್ಯಾಜಿಸ್ಟ್ರೇಟರ ಮುಂದೆ ಅಥವಾ ಸಂಬಂಧಪಟ್ಟ ಪೊಲೀಸ್ ಅಥವಾ ಮರಗಳ ಅಧಿಕಾರಿಯ ಮುಂದೆ ಹಾಜರಾಗುವುದಾಗಿ ಸೂಕ್ತ ಜಾಮೀನಿನೊಂದಿಗೆ ಅವನು ಒಂದು ಬಂಧ ಪತ್ರವನ್ನು ಬರೆದುಕೊಟ್ಟ ಮೇಲೆ ಬಿಡುಗಡೆ ಮಾಡಬಹುದು.

**19. ಅಪರಾಧ ಮಾಡುವುದನ್ನು ತಡೆಯಲು ಅಧಿಕಾರ.–** ಪ್ರತಿಯೊಬ್ಬ ಮರಗಳ ಅಧಿಕಾರಿಯು ಅಥವಾ ಅವನ ಅಧೀನ ಅಧಿಕಾರಿಗಳು ಅಥವಾ ಯಾರೇ ಅರಣ್ಯ, ರೆವೆನ್ಯೂ ಅಥವಾ ಪೊಲೀಸ್ ಅಧಿಕಾರಿಯು, ಈ ಅಧಿನಿಯಮದ ಮೇರೆಗೆ ಯಾವುದೇ ಅಪರಾಧ ನಡೆಯುವುದನ್ನು ತಡೆಯತಕ್ಕದ್ದು ಮತ್ತು ಅದನ್ನು ತಡೆಯುವ ಉದ್ದೇಶಕ್ಕಾಗಿ ಮಧ್ಯೆ ಪ್ರವೇಶಿಸಬಹುದು.

**20. ಪ್ರತಿಷೇಧಿತವಾಗದ ಇತರ ಕಾನೂನುಗಳ ಪ್ರವರ್ತನೆ.–** ಈ ಅಧಿನಿಯಮದಲ್ಲಿರುವುದು ಯಾವುದೂ, ಈ ಅಧಿನಿಯಮದ ಅಡಿಯಲ್ಲಿ ಒಂದು ಅಪರಾಧವೆನಿಸುವ ಯಾವುದೇ ಕಾರ್ಯಕ್ಕಾಗಿ ಅಥವಾ ಕೃತ್ಯಕ್ಕಾಗಿ ಕಾನೂನು ಕ್ರಮ ಜರುಗಿಸುವುದರಿಂದ ಅಥವಾ ಈ ಅಧಿನಿಯಮದಿಂದ ಅಥವಾ ಅದರ ಮೇರೆಗೆ ಮಾಡಲಾದ ನಿಯಮಗಳಿಂದ ಉಪಬಂಧಿಸಲಾದ ದಂಡನೆಗಿಂತ ಅಂಥ ಇತರ ಕಾನೂನಿನ ಅಡಿಯಲ್ಲಿ ಯಾವುದೇ ಹೆಚ್ಚಿನ ಶಿಕ್ಷೆಗೆ ಅಥವಾ ದಂಡನೆಗೆ ಗುರಿಯಾಗುವುದನ್ನು ತಡೆಯುತ್ತದೆ ಎಂದು ಭಾವಿಸತಕ್ಕದ್ದಲ್ಲ:

ಪರಂತು, ಒಂದೇ ಅಪರಾಧಕ್ಕಾಗಿ ಯಾರೇ ವ್ಯಕ್ತಿಯನ್ನು ಎರಡು ಬಾರಿ ದಂಡಿಸತಕ್ಕದ್ದಲ್ಲ.

21. **ಅಪರಾಧಗಳ ಬಗ್ಗೆ ರಾಜಿ ಮಾಡಿಕೊಳ್ಳಲು ಅಧಿಕಾರ.–** (1) ರಾಜ್ಯ ಸರ್ಕಾರವು, ಆದೇಶದ ಮೂಲಕ, ಮರಗಳ ಅಧಿಕಾರಿಗೆ,–

(ಎ) [1][ಆ ಅಪರಾಧದಲ್ಲಿ ಒಳಗೊಂಡಿರುವ ಸ್ವತ್ತಿನ ಮೌಲ್ಯದ ಶೇಕಡಾ ಇಪ್ಪತ್ತೈದಕ್ಕೆ ಸಮನಾದ][1] ಮೊತ್ತವನ್ನು ಸಂದಾಯ ಮಾಡಿದ ನಂತರ ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ಅಪರಾಧವನ್ನು ರಾಜಿ ಮಾಡಿಕೊಳ್ಳಲು;

1. 1998ರ ಅಧಿನಿಯಮ 12ರ ಮೂಲಕ 11.5.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) ವಶಪಡಿಸಿಕೊಳ್ಳಲಾದ ಅಥವಾ ಮುಟ್ಟುಗೋಲು ಹಾಕಿಕೊಳ್ಳಲು ಬದ್ಧವಾದ ಯಾವುದೇ ಸ್ವತ್ತನ್ನು, ಅಂಥ ಅಧಿಕಾರಿಯು ಅಂದಾಜು ಮಾಡಿದ ಅದರ ಮೌಲ್ಯವನ್ನು ಸಂದಾಯ ಮಾಡಿದ ಮೇಲೆ ಬಿಡುಗಡೆ ಮಾಡಲು

– ಅಧಿಕಾರ ನೀಡಬಹುದು.

(2) ಅಂಥ ಮೊತ್ತ ಅಥವಾ ಅಂಥ ಮೌಲ್ಯ ಅಥವಾ ಸಂದರ್ಭಾನುಸಾರ ಅವೆರಡನ್ನೂ ಅಂಥ ಅಧಿಕಾರಿಗೆ ಸಂದಾಯ ಮಾಡಿದ ಮೇಲೆ, ಅಪರಾಧಿಯು ಅಭಿರಕ್ಷೆಯಲ್ಲಿದ್ದರೆ, ಅವನನ್ನು ಬಿಡುಗಡೆ ಮಾಡತಕ್ಕದ್ದು. ಸ್ವತ್ತನ್ನೇನಾದರೂ ವಶಪಡಿಸಿಕೊಂಡಿದ್ದಲ್ಲಿ, ಅದನ್ನು ಬಿಡುಗಡೆ ಮಾಡತಕ್ಕದ್ದು ಮತ್ತು ಅಂಥ ಅಪರಾಧಿ ಅಥವಾ ಸ್ವತ್ತಿನ ವಿರುದ್ಧ ಯಾವುದೇ ಮುಂದಿನ ವ್ಯವಹರಣೆಗಳನ್ನು ತೆಗೆದುಕೊಳ್ಳತಕ್ಕದ್ದಲ್ಲ.

22. **ದಂಡಗಳು.–** ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ಮಾಡಲಾದ ಆದೇಶಗಳ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು, ಅಪರಾಧ ನಿರ್ಣಯವಾದ ನಂತರ, ಮೂರು ತಿಂಗಳ ಅವಧಿಗೆ ವಿಸ್ತರಿಸಬಹುದಾದ ಕಾರಾಗೃಹವಾಸದಿಂದ ಅಥವಾ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು. ಅಂಥ ಅಪರಾಧ ನಿರ್ಣಯದ ತರುವಾಯ ನ್ಯಾಯಾಲಯವು, ಯಾವ ಸ್ವತ್ತಿನ ಸಂಬಂಧದಲ್ಲಿ ಅಪರಾಧ ನಡೆದಿದೆಯೋ ಆ ಯಾವುದೇ ಸ್ವತ್ತನ್ನು ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಬಹುದು.

[1][22ಎ. **ಕಂಪನಿಗಳಿಂದ ಅಪರಾಧಗಳು.–** (1) ಈ ಅಧಿನಿಯಮದ ಅಡಿಯಲ್ಲಿನ ಅಪರಾಧವನ್ನು ಮಾಡಿದ ವ್ಯಕ್ತಿಯು ಒಂದು ಕಂಪನಿಯಾಗಿದ್ದರೆ, ಆ ಕಂಪನಿಯು ಮತ್ತು ಅಪರಾಧ ನಡೆದ ಸಮಯದಲ್ಲಿ ಕಂಪನಿಯ ಪ್ರಭಾರವನ್ನು ಹೊಂದಿದ್ದ ಮತ್ತು ಅದರ ವ್ಯವಹಾರವನ್ನು ನಡೆಸಲು ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯು ತನ್ನ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ಅದಕ್ಕನುಸಾರವಾಗಿ ದಂಡಿತನಾಗತಕ್ಕದ್ದು:

ಪರಂತು, ಈ ಉಪ ಪ್ರಕರಣದಲ್ಲಿ ಒಳಗೊಂಡಿರುವುದು ಯಾವುದೂ, ಅಂಥ ಯಾರೇ ವ್ಯಕ್ತಿಯು ಆ ಅಪರಾಧವು ತನ್ನ ಅರಿವಿಗೆ ಬಾರದಂತೆ ನಡೆದಿದೆಯೆಂದು ಅಥವಾ ಅಂಥ ಅಪರಾಧ ನಡೆಯುವುದನ್ನು ತಡೆಗಟ್ಟಲು ತಾನು ಎಲ್ಲ ಯುಕ್ತ ಜಾಗರೂಕತೆ ವಹಿಸಿದ್ದೆನೆಂದು ರುಜುವಾತುಪಡಿಸಿದರೆ, ಅವನನ್ನು ಯಾವುದೇ ದಂಡನೆಗೆ ಗುರಿಪಡಿಸತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದಲ್ಲಿ ಏನೇ ಅಡಕವಾಗಿದ್ದರೂ, ಈ ಪ್ರಕರಣದ ಅಡಿಯಲ್ಲಿನ ಅಪರಾಧವನ್ನು ಕಂಪನಿಯ ಯಾರೇ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ಮಾಡಲಾಗಿದೆಯೆಂದು ಅಥವಾ ಆ ಅಪರಾಧವು ಅವನ ಯಾವುದೇ ನಿರ್ಲಕ್ಷ್ಯದಿಂದ ನಡೆದಿದೆಯೆಂದು ಆರೋಪಿಸಬಹುದಾಗಿರುವಲ್ಲಿ, ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯನ್ನೂ ಸಹ ಆ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ಅವನು ತನ್ನ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತನಾಗತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಗಳಿಗಾಗಿ,–

(ಎ) "ಕಂಪನಿ" ಎಂದರೆ ಯಾವುದೇ ನಿಗಮಿತ ನಿಕಾಯ ಮತ್ತು ಅದು ಒಂದು ಫರ್ಮನ್ನು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಒಂದು ಫರ್ಮಿನ ಸಂಬಂಧದಲ್ಲಿ "ನಿರ್ದೇಶಕ" ಎಂದರೆ ಆ ಫರ್ಮಿನಲ್ಲಿನ ಒಬ್ಬ ಪಾಲುದಾರ.][1]

1. 1998ರ ಅಧಿನಿಯಮ 12ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ - VII

### ಸಂಕೀರ್ಣ

23. **ನಿಯಮಗಳು.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ, ಒಂದು ಅಧಿವೇಶನದಲ್ಲಿ ಅಥವಾ ಒಂದಾದ ಮೇಲೊಂದರಂತೆ ಬರುವ ಎರಡು ಅಥವಾ ಹೆಚ್ಚು ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗಿನ ಅಧಿವೇಶನದಲ್ಲಿ ಇಡತಕ್ಕದ್ದು, ಮತ್ತು ಮೇಲೆ ಹೇಳಿದ ಅಧಿವೇಶನದ ಅಥವಾ ಒಂದಾದ ಮೇಲೊಂದರಂತೆ ಬರುವ ಅಧಿವೇಶನಗಳ ನಿಕಟೋತ್ತರದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ, ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮವನ್ನು ಮಾಡಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಆ ಮಾರ್ಪಾಟನ್ನು ಅಥವಾ ರದ್ದಿಯಾತಿಯನ್ನು ಅಧಿಸೂಚಿಸಿದ ದಿನಾಂಕದಿಂದ ಅಂಥ ನಿಯಮವು ಸಂದರ್ಭಾನುಸಾರ, ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ, ಆದಾಗ್ಯೂ ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಅಡಿಯಲ್ಲಿ ಹಿಂದೆ ಮಾಡಲಾದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವನ್ನುಂಟುಮಾಡತಕ್ಕದ್ದಲ್ಲ.

24. **ನಷ್ಟಭರ್ತಿ.–** ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಲಾದ ನಿಯಮಗಳು ಅಥವಾ ಆದೇಶಗಳ ಮೇರೆಗೆ ಯಾರೇ ಅಧಿಕಾರಿಯು ಸದ್ಭಾವನೆಯಿಂದ ಮಾಡಿದ ಅಥವಾ ಮಾಡದೇ ಬಿಟ್ಟಿರುವ ಯಾವುದೇ ಕಾರ್ಯದ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ.

25. **ಮರಗಳ ಅಧಿಕಾರಿಗೆ ಕೆಲವು ಅಧಿಕಾರಗಳನ್ನು ನಿಹಿತಗೊಳಿಸುವುದು.–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಮರಗಳ ಅಧಿಕಾರಿಗಳಿಗೆ ಮತ್ತು ಇತರ ಅಧಿಕಾರಿಗಳಿಗೆ ಈ ಮುಂದಿನ ಎಲ್ಲ ಅಧಿಕಾರಗಳನ್ನು ಅಥವಾ ಆ ಪೈಕಿ ಯಾವುದೇ ಅಧಿಕಾರವನ್ನು ನಿಹಿತಗೊಳಿಸಬಹುದು, ಎಂದರೆ:–

(ಎ) ಯಾವುದೇ ಜಮೀನನ್ನು ಪ್ರವೇಶಿಸುವ ಮತ್ತು ಅದರ ಮೋಜಣಿ ಮಾಡುವ, ಸೀಮಾರೇಖೆ ಗುರುತು ಮಾಡುವ ಮತ್ತು ಅದರ ನಕ್ಷೆ ರಚಿಸುವ ಅಧಿಕಾರ;

(ಬಿ) ಸಾಕ್ಷಿಗಳ ಹಾಜರಾತಿಯನ್ನು ಮತ್ತು ದಸ್ತಾವೇಜುಗಳ ಹಾಗೂ ಮುಖ್ಯ ವಸ್ತುಗಳ ಹಾಜರುಪಡಿಸುವಿಕೆಯನ್ನು ಒತ್ತಾಯಿಸುವಲ್ಲಿ ಸಿವಿಲ್ ನ್ಯಾಯಾಲಯದ ಅಧಿಕಾರ;

(ಸಿ) 1973ರ ದಂಡ ಪ್ರಕ್ರಿಯಾ ಸಂಹಿತೆಯ ಮೇರೆಗೆ ಶೋಧನಾ ವಾರಂಟನ್ನು ಹೊರಡಿಸುವ ಅಧಿಕಾರ;

(ಡಿ) ಈ ಅಧಿನಿಯಮದ ಮೇರೆಗೆ ಅಪರಾಧಗಳ ಬಗ್ಗೆ ವಿಚಾರಣೆಗಳನ್ನು ನಡೆಸುವ ಮತ್ತು ಅಂಥ ವಿಚಾರಣೆಯ ಅವಧಿಯಲ್ಲಿ ಸಾಕ್ಷ್ಯಗಳನ್ನು ಸ್ವೀಕರಿಸುವ ಮತ್ತು ದಾಖಲಿಸುವ ಅಧಿಕಾರ;

(ಇ) ಈ ಅಧಿನಿಯಮದ ಮೇರೆಗೆ ಆಸ್ತಿಯನ್ನು ವಶಕ್ಕೆ ತೆಗೆದುಕೊಳ್ಳುವ ಅಧಿಕಾರ;

(ಎಫ್) ಸ್ವತ್ತನ್ನು ಬಿಡುಗಡೆ ಮಾಡುವಂತೆ ಅಥವಾ ಆರೋಪಗಳನ್ನು ಹಿಂತೆಗೆದುಕೊಳ್ಳುವಂತೆ ನಿರ್ದೇಶಿಸುವ ಅಧಿಕಾರ;

(ಜಿ) ಯಾರೇ ವ್ಯಕ್ತಿಯನ್ನು, ಅವನ ಒಡೆತನದಲ್ಲಿರುವ ಅಥವಾ ಅವನ ಅಧಿಭೋಗದಲ್ಲಿರುವ ಯಾವುದೇ ಜಮೀನಿನಲ್ಲಿ ಸಾಕಷ್ಟು ಸಂಖ್ಯೆಯ ಸೂಕ್ತ ತಳಿಗಳ ಮರ ಅಥವಾ ಮರಗಳನ್ನು ನೆಡುವಂತೆ ಒತ್ತಾಯಿಸುವ ಅಧಿಕಾರ.

(2) (1)ನೇ ಉಪ ಪ್ರಕರಣದ (ಡಿ) ಖಂಡದ ಮೇರೆಗೆ ದಾಖಲಿಸಲಾದ ಯಾವುದೇ ಸಾಕ್ಷ್ಯವು, ಅಂಥ ಸಾಕ್ಷ್ಯವನ್ನು ಆರೋಪಿತ ವ್ಯಕ್ತಿಯ ಸಮಕ್ಷಮದಲ್ಲಿ ತೆಗೆದುಕೊಂಡಿದ್ದರೆ ಮತ್ತು 1973ರ ದಂಡ ಪ್ರಕ್ರಿಯಾ ಸಂಹಿತೆಯ 355ನೇ ಪ್ರಕರಣ, 356ನೇ ಪ್ರಕರಣ ಅಥವಾ 357ನೇ ಪ್ರಕರಣದಲ್ಲಿ ಉಪಬಂಧಿಸಲಾದ ರೀತಿಯಲ್ಲಿ ದಾಖಲಿಸಿದ್ದರೆ, ಅದು ಮ್ಯಾಜಿಸ್ಟ್ರೇಟರ ಮುಂದಿನ ಯಾವುದೇ ತರುವಾಯದ ಅಧಿವಿಚಾರಣೆಯಲ್ಲಿ ಅಂಗೀಕಾರಾರ್ಹವಾಗತಕ್ಕದ್ದು.

**26. ಕಡಿದ ಸಾಮಗ್ರಿಗಳ ಸಾಗಣೆ.–** ಕರ್ನಾಟಕ ಅರಣ್ಯ ಅಧಿನಿಯಮ, 1963ರ (1964ರ ಕರ್ನಾಟಕ ಅಧಿನಿಯಮ 5) 50ನೇ ಪ್ರಕರಣದ ಉಪಬಂಧಗಳು ಮತ್ತು ಕರ್ನಾಟಕ ಅರಣ್ಯ ನಿಯಮಗಳ XVIನೇ ಅಧ್ಯಾಯವು, ಯಥೋಚಿತ ವ್ಯತ್ಯಾಸಗಳೊಂದಿಗೆ, ಈ ಅಧಿನಿಯಮದ ಮೇರೆಗಿನ ಕಡಿದ ಮರಗಳ ಸಾಗಣೆಗೆ ಅನ್ವಯವಾಗತಕ್ಕದ್ದು.

**27. ನಿರ್ದೇಶನಗಳನ್ನು ನೀಡಲು ರಾಜ್ಯ ಸರ್ಕಾರದ ಮತ್ತು ಮರಗಳ ಪ್ರಾಧಿಕಾರದ ಅಧಿಕಾರ.–** ರಾಜ್ಯ ಸರ್ಕಾರವು, ಕಾಲಕಾಲಕ್ಕೆ, ಮರಗಳ ಪ್ರಾಧಿಕಾರಕ್ಕೆ ಅಥವಾ ಯಾರೇ ಮರಗಳ ಅಧಿಕಾರಿಗೆ ಮತ್ತು ಅವನಿಗೆ ಅಧೀನರಾದ ಅಧಿಕಾರಿಗಳಿಗೆ ಅವರ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕೆ ಮತ್ತು ಈ ಅಧಿನಿಯಮದ ಉದ್ದೇಶಗಳನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸುವುದಕ್ಕೆ ಸಂಬಂಧಿಸಿದಂಥ ಸಾಮಾನ್ಯ ಅಥವಾ ವಿಶೇಷ ನಿರ್ದೇಶನಗಳನ್ನು ನೀಡಬಹುದು ಮತ್ತು ನೀಡಲಾದ ಆ ನಿರ್ದೇಶನಗಳನ್ನು ಅಂಥ ಮರಗಳ ಪ್ರಾಧಿಕಾರ ಅಥವಾ ಮರಗಳ ಅಧಿಕಾರಿಗಳು ಪಾಲಿಸತಕ್ಕದ್ದು.

[1][27ಎ. **ಈ ಅಧಿನಿಯಮದ, ಪ್ರವರ್ತನೆಯಿಂದ ಕೆಲವು ಪ್ರದೇಶಗಳಿಗೆ ವಿನಾಯಿತಿ.–** ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಮತ್ತು ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೊಳಪಟ್ಟು, ಯಾವುದೇ ಪ್ರದೇಶ ಅಥವಾ ಯಾವುವೇ ಪ್ರದೇಶಗಳನ್ನು ಈ ಅಧಿನಿಯಮದ ಉಪಬಂಧಗಳಿಂದ ವಿನಾಯಿತಿಗೊಳಿಸಬಹುದು.][1]

1. 1979ರ ಅಧಿನಿಯಮ 14ರ ಮೂಲಕ 22.9.1978ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**28. ಕರ್ನಾಟಕ ಅರಣ್ಯ ಅಧಿನಿಯಮ, 1963ಕ್ಕೆ ಬಾಧಕವಾಗದಿರುವುದು.–** ಈ ಅಧಿನಿಯಮದಲ್ಲಿರುವುದು ಯಾವುದೂ, ಕರ್ನಾಟಕ ಅರಣ್ಯ ಅಧಿನಿಯಮ, 1963 ಅಥವಾ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964 ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಪ್ರವರ್ತನೆಗೆ ಬಾಧಕವನ್ನುಂಟುಮಾಡತಕ್ಕದ್ದಲ್ಲ ಮತ್ತು ಈ ಅಧಿನಿಯಮದ ಉಪಬಂಧಗಳು, ಸದರಿ ಅಧಿನಿಯಮಗಳ ಮತ್ತು ನಿಯಮಗಳ ಉಪಬಂಧಗಳಿಗೆ ಹೆಚ್ಚಿಗೆಯಾಗಿರತಕ್ಕದ್ದೇ ಹೊರತು ಅದನ್ನು ನ್ಯೂನಗೊಳಿಸತಕ್ಕದ್ದಲ್ಲ.

**29. 1976ರ ಕರ್ನಾಟಕ ಅಧ್ಯಾದೇಶ ಸಂ.14ರ ನಿರಸನ.–** (1) ಕರ್ನಾಟಕ ಮರಗಳ ಸಂರಕ್ಷಣಾ ಅಧ್ಯಾದೇಶ, 1976ನ್ನು (1976ರ ಕರ್ನಾಟಕ ಅಧ್ಯಾದೇಶ ಸಂ 14) ಈ ಮೂಲಕ ನಿರಸನಗೊಳಿಸಲಾಗಿದೆ.

[1][(2) ಹಾಗೆ ನಿರಸಿತವಾಗಿದ್ದರೂ, ಸದರಿ ಅಧ್ಯಾದೇಶದ ಮೇರೆಗೆ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಅಥವಾ ಮಾಡಲಾದ ಅಥವಾ ಹೊರಡಿಸಲಾದ ಯಾವುದೇ ನೇಮಕಾತಿ, ಅಧಿಸೂಚನೆ, ಆದೇಶ, ಯೋಜನೆ, ನಿಯಮ, ನಮೂನೆ ಅಥವಾ ಉಪವಿಧಿಯನ್ನು ಈ ಅಧಿನಿಯಮದ ಅಡಿಯಲ್ಲಿ ಕೈಗೊಳ್ಳಲಾಗಿದೆ, ಮಾಡಲಾಗಿದೆ ಅಥವಾ ಹೊರಡಿಸಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಈ ಅಧಿನಿಯಮದ ಅಡಿಯಲ್ಲಿ ಕೈಗೊಳ್ಳಲಾದ ಯಾವುದೇ ಕ್ರಮದ ಮೂಲಕ ಮಾಡಲಾದ ಅಥವಾ ಹೊರಡಿಸಲಾದ ಯಾವುದೇ ನೇಮಕಾತಿ, ಅಧಿಸೂಚನೆ, ಆದೇಶ, ಯೋಜನೆ, ನಿಯಮ, ನಮೂನೆ ಅಥವಾ ಉಪವಿಧಿಗಳ ಮೂಲಕ ರದ್ದುಗೊಳಿಸಿದ ಹೊರತು ಮತ್ತು ಅಲ್ಲಿಯವರೆಗೆ ತದನುಸಾರವಾಗಿ ಜಾರಿಯಲ್ಲಿರುವುದು ಮುಂದುವರಿಯತಕ್ಕದ್ದು.][1]

1. 1979ರ ಅಧಿನಿಯಮ 14ರ ಮೂಲಕ 4.12.1976ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**ಅನುಸೂಚಿ – I**

**[2(ಇ) ಪ್ರಕರಣ ನೋಡಿ]**

ರಾಜ್ಯ ಸರ್ಕಾರಕ್ಕೆ ಸೇರಿರುವ ಮತ್ತು ಇತರರ ಹೆಸರಿಗೆ ಬಿಡುಗಡೆ ಮಾಡಿದ ಮರದ ರಾಶಿಗಳು ಮತ್ತು ಜಮೀನುಗಳೂ ಸೇರಿದಂತೆ, [1][xxx][1] ಚಹ, ರಬ್ಬರ್, [1][xxx][1] ಅಥವಾ ಸಿಂಕೋನಾ ಸಾಗುವಳಿ ಜಮೀನುಗಳ ಅಡಿಯಲ್ಲಿ ಒಳಗೊಂಡಿರುವ ಪ್ರದೇಶಗಳು.

1. 1998ರ ಅಧಿನಿಯಮ 12ರ ಮೂಲಕ 11.5.1998ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**ಅನುಸೂಚಿ –□II**

**[2(ಇ) ಪ್ರಕರಣ ನೋಡಿ)**

1ನೇ ಅನುಸೂಚಿಯಲ್ಲಿ ಸೇರಿರುವುದಕ್ಕೆ ಹೊರತಾದ ಜಮೀನುಗಳನ್ನು ಒಳಗೊಂಡಿರುವ ಪ್ರದೇಶಗಳು.

**ಅಧಿಸೂಚನೆ**

**ಬೆಂಗಳೂರು, ದಿನಾಂಕ 31.10.1981 [ಸಂ. ಎಫ್‌ಎಫ್‌ಡಿ 107 ಎಫ್‌ಟಿಎಸ್ 81]**

**ಎಸ್.ಓ. 2494.–** ಕರ್ನಾಟಕ ಮರಗಳ ಸಂರಕ್ಷಣಾ ಅಧಿನಿಯಮ, 1976ರ (1976ರ ಕರ್ನಾಟಕ ಅಧಿನಿಯಮ 76) 1ನೇ ಪ್ರಕರಣದ (3)ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1981ರ ನವೆಂಬರ್ ತಿಂಗಳ ಮೊದಲ ದಿನಾಂಕವನ್ನು 7(ಸಿ), 9, 10, 11, 13, 14, 22ನೇ ಪ್ರಕರಣದ ಉಪಬಂಧಗಳು, ಇಲ್ಲಿ ಈ ಮುಂದೆ ಕೊಟ್ಟಿರುವ ತಃಖ್ತೆಯ ಭಾಗ–ಎ ಯಲ್ಲಿ ನಮೂದಿಸಿದ ಜಿಲ್ಲೆಗಳಲ್ಲಿ ಮತ್ತು ಭಾಗ–ಬಿ ಯಲ್ಲಿ ನಮೂದಿಸಿರುವ ತಾಲ್ಲೂಕುಗಳಲ್ಲಿ, ಅನುಸೂಚಿಯ ಭಾಗ–ಸಿ ಯಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ಜಾರಿಯಲ್ಲಿ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ, ಎಂದರೆ:–

**ಭಾಗ–ಎ**

| | | | |
|---|---|---|---|
| 1. | ಬೆಳಗಾವಿ ಜಿಲ್ಲೆ | 7. | ಬಳ್ಳಾರಿ ಜಿಲ್ಲೆ |
| 2. | ಧಾರವಾಡ ಜಿಲ್ಲೆ | 8. | ಚಿತ್ರದುರ್ಗ ಜಿಲ್ಲೆ |
| 3. | ಬಿಜಾಪುರ ಜಿಲ್ಲೆ | 9. | ತುಮಕೂರು ಜಿಲ್ಲೆ |
| 4. | ಬೀದರ್ ಜಿಲ್ಲೆ | 10. | ಬೆಂಗಳೂರು ಜಿಲ್ಲೆ |
| 5. | ಗುಲ್ಬರ್ಗ ಜಿಲ್ಲೆ | 11. | ಕೋಲಾರ ಜಿಲ್ಲೆ |
| 6. | ರಾಯಚೂರು ಜಿಲ್ಲೆ | 12. | ಮಂಡ್ಯ ಜಿಲ್ಲೆ |

**ಭಾಗ–ಬಿ**

| | | | |
|---|---|---|---|
| 1. | ಅಥಣಿ | 12. | ಸಿಂದಗಿ |
| 2. | ಚಿಕ್ಕೋಡಿ | 13. | ಬಾಗೇವಾಡಿ |
| 3. | ಹುಕ್ಕೇರಿ | 14. | ಮುದ್ದೆಬಿಹಾಳ |
| 4. | ಗೋಕಾಕ್ | 15. | ಹುನಗುಂದ |
| 5. | ರಾಯಭಾಗ್ | 16. | ಬಾದಾಮಿ |
| 6. | ರಾಮದುರ್ಗ | 17. | ಬಾಗಲಕೋಟೆ |
| 7. | ಸವದತ್ತಿ | 18. | ಬೀಳಗಿ |
| 8. | ಬೈಲಹೊಂಗಲ | 19. | ಮುಧೋಳ |
| 9. | ಬೆಳಗಾವಿ | 20. | ಜಮಖಂಡಿ |
| 10. | ಬಿಜಾಪುರ | 21. | ಗುಲ್ಬರ್ಗ |
| 11. | ಇಂಡಿ | 22. | ಚಿಂಚೋಳಿ |

23. ಯಾದಗೀರ್
24. ಚಿತ್ತಾಪುರ್
25. ಜೇವರ್ಗಿ
26. ಅಫಜಲ್‌ಪುರ್
27. ಶಹಾಪುರ
28. ಶೋರಾಪುರ
29. ಆಲಂದ
30. ಸೇಡಂ
31. ಬೀದರ್
32. ಹುಮನಾಬಾದ್
33. ಔರಾದ್
34. ದೂಮ್ ಕೇರ್
35. ಭಾಲ್ಕಿ
36. ರಾಯಚೂರ್
37. ದೇವದುರ್ಗ
38. ಮಾನ್ವಿ
39. ಲಿಂಗಸುಗೂರ್
40. ಸಿಂದನೂರ್
41. ಗಂಗಾವತಿ
42. ಕೊಪ್ಪಳ
43. ಕುಷ್ಠಗಿ
44. ಯಲಬುರ್ಗ
45. ಗದಗ್
46. ರೋಣ
47. ನರಗುಂದ
48. ನವಲ್‌ಗುಂದ
49. ಮುಂಡರ್ಗಿ
50. ಶಿರಹಟ್ಟಿ
51. ಹಾವೇರಿ
52. ರಾಣೇಬೆನ್ನೂರ್
53. ಬ್ಯಾಡಗಿ
54. ಹಿರೇಕೆರೂರು
55. ಸವಣೂರು
56. ಕುಂದಗೋಳ
57. ಹುಬ್ಬಳ್ಳಿ
58. ಬಳ್ಳಾರಿ
60. ಹೊಸಪೇಟೆ
61. ಸಂಡೂರು
62. ಕೂಡ್ಲಿಗಿ
63. ಹಡಗಲಿ
64. ಹರಪನಹಳ್ಳಿ
65. ಕೊಟ್ಟೂರು
66. ಮೊಳಕಾಲ್ಮೂರು
67. ಚಳ್ಳಕೆರೆ
68. ಹಿರಿಯೂರು
69. ಹೊಸದುರ್ಗ
70. ಹೊಳಲ್ಕೆರೆ
71. ಜಗಳೂರು
72. ದಾವಣಗೆರೆ
73. ಚಿತ್ರದುರ್ಗ
74. ಹರಿಹರ
75. ಚನ್ನಗಿರಿ
76. ಹೊನ್ನಾಳಿ
77. ಕಡೂರು
78. ಹಾಸನ
79. ಅರಸೀಕೆರೆ
80. ಆಲೂರು
81. ಚನ್ನರಾಯಪಟ್ಟಣ
82. ಹೊಳೆನರಸೀಪುರ
83. ತುಮಕೂರು
84. ಮಧುಗಿರಿ
85. ಗುಬ್ಬಿ
86. ಸಿರಾ
87. ಪಾವಗಡ
88. ಚಿಕ್ಕನಾಯಕನಹಳ್ಳಿ
89. ತಿಪಟೂರು
90. ತುರುವೇಕೆರೆ
91. ಕುಣಿಗಲ್
92. ಕೊರಟಗೆರೆ
93. ಬೆಂಗಳೂರು (ಉತ್ತರ)
94. ಬೆಂಗಳೂರು (ದಕ್ಷಿಣ)
95. ದೊಡ್ಡಬಳ್ಳಾಪುರ
96. ದೇವನಹಳ್ಳಿ
97. ಹೊಸಕೋಟೆ
98. ಆನೇಕಲ್
99. ಕನಕಪುರ
100. ಚನ್ನಪಟ್ಟಣ
101. ರಾಮನಗರಂ
102. ಮಾಗಡಿ
103. ನೆಲಮಂಗಲ
104. ಕೋಲಾರ
105. ಬಾಗೇಪಲ್ಲಿ

106. ಗೌರಿಬಿದನೂರು
107. ಮಾಲೂರು
108. ಚಿಕ್ಕಬಳ್ಳಾಪುರ
109. ಶಿಡ್ಲಘಟ್ಟ
110. ಗುಡಿಬಂಡೆ
111. ಬಂಗಾರಪೇಟೆ
112. ಮುಳಬಾಗಿಲು
113. ಚಿಂತಾಮಣಿ
114. ಶ್ರೀನಿವಾಸಪುರ
115. ಮಂಡ್ಯ
116. ಮಳವಳ್ಳಿ
117. ಶ್ರೀರಂಗಪಟ್ಟಣ
118. ಮದ್ದೂರು
119. ಕೃಷ್ಣರಾಜಪೇಟೆ
120. ನಾಗಮಂಗಲ
121. ಪಾಂಡವಪುರ
122. ಮೈಸೂರು
123. ನಂಜನಗೂಡು
124. ಟಿ. ನರಸೀಪುರ
125. ಕೃಷ್ಣರಾಜನಗರ
126. ಬಂಟ್ವಾಳ
127. ಉಡುಪಿ
128. ಮಂಗಳೂರು

**ಭಾಗ – ಸಿ**

1. ಕರ್ನಾಟಕ ಅರಣ್ಯ ಅಧಿನಿಯಮ, 1963ರ 17ನೇ ಪ್ರಕರಣದ ಅಡಿಯಲ್ಲಿ ಅಧಿಸೂಚಿತ ಮೀಸಲು ಅರಣ್ಯ.
2. ತೋಟಗಾರಿಕಾ ಇಲಾಖೆ ಅಥವಾ ಕೃಷಿ ವಿಜ್ಞಾನ ವಿಶ್ವವಿದ್ಯಾನಿಲಯದ ನಿಯಂತ್ರಣ ಮತ್ತು ಆಡಳಿತದ ಅಡಿಯಲ್ಲಿರುವ ಭೂಮಿಗಳು.
3. ಕಾಫಿ ಮತ್ತು ಟೀ ಬೆಳೆಯ ಸಂದರ್ಭದಲ್ಲಿ ಪ್ರತಿ ಹೆಕ್ಟೇರಿಗೆ 750ಕ್ಕಿಂತ ಕಡಿಮೆ ಮತ್ತು ರಬ್ಬರ್ ಬೆಳೆಯ ಸಂದರ್ಭದಲ್ಲಿ ಪ್ರತಿ ಹೆಕ್ಟೇರಿಗೆ 225ಕ್ಕಿಂತ ಕಡಿಮೆ ಸಂಖ್ಯೆಯ ಗಿಡಗಳನ್ನು ಹೊಂದಿರುವಂತಹ ಕಾಫಿ, ಟೀ ಮತ್ತು ರಬ್ಬರನ್ನು ಸಾಗುವಳಿ ಮಾಡಿರುವ ಭೂ ಪ್ರದೇಶ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ರಾಧಾಬಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಆಹಾರ ಮತ್ತು ಅರಣ್ಯ ಇಲಾಖೆ.

**29ನೇ ಪ್ರಕರಣದ ಮೂಲಕ ನಿರಸನಗೊಳಿಸಿದ ಅಧ್ಯಾದೇಶದ ಅಡಿಯಲ್ಲಿ ಹೊರಡಿಸಲಾದ ಅಧಿಸೂಚನೆಗಳು**
**(ತಿದ್ದುಪಡಿಯಾದ 29(2)ನೇ ಪ್ರಕರಣದ ದೃಷ್ಟಿಯಿಂದ ಪ್ರಕಟಿಸಲಾಗಿದೆ)**

**I**

**ಬೆಂಗಳೂರು, ದಿನಾಂಕ 20ನೇ ಜುಲೈ 1976 [ಸಂಖ್ಯೆ ಎಫ್‌ಎಫ್‌ಡಿ 100 ಎಫ್‌ಡಿಪಿ 76(1)]**

**ಎಸ್.ಓ.1873.–** ಕರ್ನಾಟಕ ಮರಗಳ ಸಂರಕ್ಷಣೆ ಅಧ್ಯಾದೇಶ, 1976ರ (1976ರ ಕರ್ನಾಟಕ ಅಧ್ಯಾದೇಶ 14) 1ನೇ ಪ್ರಕರಣದ (3)ನೇ ಉಪ–ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1976ರ ಜುಲೈ ತಿಂಗಳ 21ನೇ ದಿನಾಂಕವನ್ನು ಸದರಿ ಅಧ್ಯಾದೇಶದ ಎಲ್ಲ ಉಪಬಂಧಗಳು ಈ ಕೆಳಗಿನ ಅನುಸೂಚಿಯ ಬಿ–ಭಾಗದಲ್ಲಿ ನಿರ್ದಿಷ್ಟಪಡಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ಅನುಸೂಚಿಯ ಎ–ಭಾಗದಲ್ಲಿ ನಿರ್ದಿಷ್ಟಪಡಿಸಿರುವ ನಗರ ಪ್ರದೇಶಗಳಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

**ಅನುಸೂಚಿ**

**ಭಾಗ ಎ**

**ಈ ಮುಂದಿನವುಗಳ ವ್ಯಾಪ್ತಿಯೊಳಗೆ ಬರುವ ಪ್ರದೇಶಗಳು,–**

| | |
|---|---|
| 1. ಬೆಂಗಳೂರು ನಗರ ಪೌರ ನಿಗಮ | 22. ಕೊಡ್ಲಿಪೇಟೆ ಪುರಸಭೆ |
| 2. ಮೈಸೂರು ನಗರ ಮುನಿಸಿಪಲ್ ಕೌನ್ಸಿಲ್ | 23. ಕುಶಾಲ ನಗರ ಪುರಸಭೆ |
| 3. ಮಂಗಳೂರು ನಗರ ಮುನಿಸಿಪಲ್ ಕೌನ್ಸಿಲ್ | 24. ಶನಿವಾರಸಂತೆ ಪುರಸಭೆ |
| 4. ಬೆಳಗಾವಿ ನಗರ ಮುನಿಸಿಪಲ್ ಕೌನ್ಸಿಲ್ | 25. ಸೋಮವಾರ ಪೇಟೆ ಪುರಸಭೆ |
| 5. ಬೆಳಗಾವಿ ದಂಡು ಪ್ರದೇಶ ಮಂಡಳಿ | 26. ಶುಂಠಿಕೊಪ್ಪ ಪುರಸಭೆ |
| 6. ಹುಬ್ಬಳ್ಳಿ – ಧಾರವಾಡ ಪೌರ ನಿಗಮ | 27. ಪೊನ್ನಂಪೇಟೆ ಪುರಸಭೆ |
| 7. ಬಳ್ಳಾರಿ ನಗರ ಪುರ ಸಭೆ | 28. ಗೋಣಿಕೊಪ್ಪ ಪುರಸಭೆ |
| 8. ಬಿಜಾಪುರ ನಗರ ಪುರ ಸಭೆ | 29. ವಿರಾಜಪೇಟೆ ಪುರಸಭೆ |
| 9. ದಾವಣಗೆರೆ ನಗರ ಪುರ ಸಭೆ | 30. ಶಿಗ್ಗಾವಿ ಪುರಸಭೆ |
| 10. ಗುಲ್ಬರ್ಗ ನಗರ ಪುರ ಸಭೆ | 31. ಹಾನಗಲ್ ಪುರಸಭೆ |
| 11. ರಾಬರ್ಟ್‌ಸನ್ ಪೇಟೆ ಮುನಿಸಿಪಲ್ ಕೌನ್ಸಿಲ್ ಪ್ರದೇಶವನ್ನು ಒಳಗೊಂಡಿರುವ ಕೆ.ಜಿ.ಎಫ್ | 32. ಕಲಘಟಗಿ ಪುರಸಭೆ |
| | 33. ಅರಕಲಗೂಡು ಪುರಸಭೆ |
| 12. ಭದ್ರಾವತಿ ಟೌನ್ ಮುನಿಸಿಪಲ್ ಕೌನ್ಸಿಲ್ ಮತ್ತು ಅಧಿಸೂಚಿತ ಪ್ರದೇಶ, ಭದ್ರಾವತಿ | 34. ಕೊಣನೂರು ಪುರಸಭೆ |
| | 35. ಬೇಲೂರು ಪುರಸಭೆ |
| 13. ಶಿವಮೊಗ್ಗ ನಗರ ಸಭೆ | 36. ಹಾಸನ ನಗರಸಭೆ |
| 14. ಖಾನಾಪುರ ಪುರಸಭೆ | 37. ಸಕಲೇಶಪುರ ಪುರಸಭೆ |
| 15. ಚಿಕ್ಕಮಗಳೂರು ಪುರಸಭೆ | 38. ಚಾಮರಾಜನಗರ ಪುರಸಭೆ |
| 16. ಮೂಡಿಗೆರೆ ಪುರಸಭೆ | 39. ಗುಂಡ್ಲುಪೇಟೆ ಪುರಸಭೆ |
| 17. ಎನ್. ಆರ್. ಪುರ ಪುರಸಭೆ | 40. ಹೆಗ್ಗಡದೇವನ ಕೋಟೆ ಪುರಸಭೆ |
| 18. ಕೊಪ್ಪ ಪುರಸಭೆ | 41. ಹುಣಸೂರು ಪುರಸಭೆ |
| 19. ಶೃಂಗೇರಿ ಪುರಸಭೆ | 42. ಕೊಳ್ಳೆಗಾಲ ಪುರಸಭೆ |
| 20. ಮಡಿಕೇರಿ ಪುರಸಭೆ | 43. ಪೆರಿಯಾಪಟ್ಟಣ ಪುರಸಭೆ |
| 21. ಹೆಬ್ಬಾಳ ಪುರಸಭೆ | 44. ಎಳಂದೂರು ಪುರಸಭೆ |
| | 45. ಸರಗೂರು ಪುರಸಭೆ |

| | | | |
|---|---|---|---|
| 46. | ಅಂಕೋಲ ಪುರಸಭೆ | 56. | ಸಾಗರ ಪುರಸಭೆ |
| 47. | ಹೊನ್ನಾವರ ಪುರಸಭೆ | 57. | ಶಿಕಾರಿಪುರ ಪುರಸಭೆ |
| 48. | ಹಳಿಯಾಳ ಪುರಸಭೆ | 58. | ತರೀಕೆರೆ ಪುರಸಭೆ |
| 49. | ಕುಮಟ ಪುರಸಭೆ | 59. | ಸೊರಬ ಪುರಸಭೆ |
| 50. | ಕಾರವಾರ ಪುರಸಭೆ | 60. | ಶಿರಾಳಿಕೊಪ್ಪ ಪುರಸಭೆ |
| 51. | ಮುಂಡಗೋಡ ಪುರಸಭೆ | 61. | ತೀರ್ಥಹಳ್ಳಿ ಪುರಸಭೆ |
| 52. | ಸಿದ್ಧಾಪುರ ಪುರಸಭೆ | 62. | ಉಡುಪಿ ಪುರಸಭೆ |
| 53. | ಸಿರಸಿ ಪುರಸಭೆ | 63. | ಕಾರ್ಕಳ ಪುರಸಭೆ |
| 54. | ದಾಂಡೇಲಿ ಪುರಸಭೆ | 64. | ಪುತ್ತೂರು ಪುರಸಭೆ |
| 55. | ಹೊಸನಗರ ಪುರಸಭೆ | 65. | ಕುಂದಾಪುರ ಪುರಸಭೆ |

**ಭಾಗ – ಬಿ**

**ಎ ಭಾಗದಲ್ಲಿ ನಿರ್ದಿಷ್ಟಪಡಿಸಲಾದ ಪ್ರದೇಶಗಳಿಂದ ಹೊರತುಪಡಿಸಲಾದ ಪ್ರದೇಶಗಳು**

ಸರ್ಕಾರದ ತೋಟಗಾರಿಕೆ ಇಲಾಖೆ ಮತ್ತು ಕೃಷಿ ವಿಜ್ಞಾನ ವಿಶ್ವವಿದ್ಯಾನಿಲಯದ ನಿಯಂತ್ರಣ ಮತ್ತು ಆಡಳಿತದ ಅಡಿಯಲ್ಲಿ ಬರುವ ಜಮೀನು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಪದ್ಮನಾಭ**

ಆಯುಕ್ತರು ಮತ್ತು ಸರ್ಕಾರದ ಕಾರ್ಯದರ್ಶಿ,

ಆಹಾರ ಮತ್ತು ಅರಣ್ಯ ಇಲಾಖೆ.

(ದಿನಾಂಕ: 21.7.1976ರ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗIV–2ಸಿ(ii) ರಲ್ಲಿ ಸಂಖ್ಯೆ 3501 ಆಗಿ ಪ್ರಕಟಿಸಲಾಗಿದೆ.)

**II**

**ಬೆಂಗಳೂರು, ದಿನಾಂಕ: 20ನೇ ಜುಲೈ 1976 [ಸಂಖ್ಯೆ ಎಫ್‌ಎಫ್‌ಡಿ 100 ಎಫ್‌ಡಿಪಿ 76 (II□]**

**ಎಸ್.ಒ.1874.–** ಕರ್ನಾಟಕ ಮರಗಳ ಸಂರಕ್ಷಣಾ ಅಧ್ಯಾದೇಶ, 1976ರ (1976ರ ಕರ್ನಾಟಕ ಅಧ್ಯಾದೇಶ 14) 1ನೇ ಪ್ರಕರಣದ (3)ನೇ ಉಪ–ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1976ರ ಜುಲೈ ತಿಂಗಳ 21ನೇ ದಿನಾಂಕವನ್ನು ಸದರಿ ಅಧ್ಯಾದೇಶದ ಎಲ್ಲ ಉಪಬಂಧಗಳು ಈ ಮುಂದಿನ ಕೋಷ್ಟಕದ ಭಾಗ ಬಿ ನಲ್ಲಿ ನಮೂದಿಸಲಾದ ಪ್ರದೇಶಗಳನ್ನು ಹೊರತುಪಡಿಸಿ, ಕೋಷ್ಟಕದ ಎ–ಭಾಗದಲ್ಲಿ ನಮೂದಿಸಲಾದ ಎಲ್ಲಾ ಜಿಲ್ಲೆಗಳಲ್ಲಿರುವ ಸದರಿ ಅಧ್ಯಾದೇಶದ 1ನೇ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ ಗ್ರಾಮೀಣ ಪ್ರದೇಶಗಳಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

**ಕೋಷ್ಟಕ**

**ಭಾಗ–ಎ**

1. ಚಿಕ್ಕಮಗಳೂರು
2. ಹಾಸನ
3. ಉತ್ತರ ಕನ್ನಡ
4. ಶಿವಮೊಗ್ಗ
5. ಮೈಸೂರು
6. ದಕ್ಷಿಣ ಕನ್ನಡ
7. ಕೊಡಗು

**ಭಾಗ 'ಬಿ'**

1. ಕರ್ನಾಟಕ ಅರಣ್ಯ ಅಧಿನಿಯಮ, 1963ರ 17ನೇ ಪ್ರಕರಣದ ಮೇರೆಗೆ ಅಧಿಸೂಚಿತವಾದ ಮೀಸಲು ಅರಣ್ಯ.
2. ತೋಟಗಾರಿಕಾ ಇಲಾಖೆ ಅಥವಾ ಕೃಷಿ ವಿಜ್ಞಾನ ವಿಶ್ವವಿದ್ಯಾನಿಲಯದ ನಿಯಂತ್ರಣ ಮತ್ತು ಆಡಳಿತದಲ್ಲಿರುವ ಜಮೀನು.
3. ಕಾಫಿ ಮತ್ತು ಚಹ ಬೆಳೆಯ ಸಂದರ್ಭದಲ್ಲಿ ಪ್ರತಿ ಹೆಕ್ಟೇರಿಗೆ 750ಕ್ಕಿಂತ ಕಡಿಮೆ ಇಲ್ಲದಷ್ಟು ಮತ್ತು ರಬ್ಬರ್ ಬೆಳೆಯ ಸಂದರ್ಭದಲ್ಲಿ ಪ್ರತಿ ಹೆಕ್ಟೇರಿಗೆ 225ಕ್ಕಿಂತ ಕಡಿಮೆ ಇಲ್ಲದಷ್ಟು ಸಂಖ್ಯೆಯ ಗಿಡಗಳನ್ನು ಹೊಂದಿರುವಂಥ ಕಾಫಿ, ಚಹ ಮತ್ತು ರಬ್ಬರು ಸಾಗುವಳಿ ಮಾಡಿರುವ ಜಮೀನು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಪದ್ಮನಾಭ**

ಆಯುಕ್ತರು ಮತ್ತು ಸರ್ಕಾರದ ಕಾರ್ಯದರ್ಶಿ,

ಆಹಾರ ಮತ್ತು ಅರಣ್ಯ ಇಲಾಖೆ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ–IV೨ 2ಸಿ (ii) ದಿನಾಂಕ 21.7.1976 ರಲ್ಲಿ ಸಂಖ್ಯೆ 3502 ಆಗಿ ಪ್ರಕಟಿಸಲಾಗಿದೆ.)

**III**

**ಬೆಂಗಳೂರು, ದಿನಾಂಕ 20ನೇ ಜುಲೈ 1976 [ಸಂಖ್ಯೆ ಎಫ್‌ಎಫ್‌ಡಿ 100 ಎಫ್‌ಡಿಪಿ 76(III)]**

**ಎಸ್.ಓ.1875.–** ಕರ್ನಾಟಕ ಮರಗಳ ಸಂರಕ್ಷಣಾ ಅಧ್ಯಾದೇಶ, 1976ರ (1976ರ ಕರ್ನಾಟಕ ಅಧ್ಯಾದೇಶ 17) 1ನೇ ಪ್ರಕರಣದ (3)ನೇ ಉಪ–ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1976ರ ಜುಲೈ ತಿಂಗಳ 21ನೇ ದಿನಾಂಕವನ್ನು ಸದರಿ ಅಧ್ಯಾದೇಶದ 7ನೇ ಪ್ರಕರಣದ (ಇ) ಮತ್ತು (ಜಿ) ಖಂಡದ ಉಪಬಂಧಗಳು, ಕೆಳಗೆ ನೀಡಲಾದ ಕೋಷ್ಟಕದ 'ಬಿ' ಭಾಗದಲ್ಲಿ ನಮೂದಿಸಲಾದ ಪ್ರದೇಶಗಳನ್ನು ಹೊರತುಪಡಿಸಿ, ಈ ಕೋಷ್ಟಕದ ಎ–ಭಾಗದಲ್ಲಿ ನಮೂದಿಸಲಾದ ಜಿಲ್ಲೆಗಳಲ್ಲಿ ಸದರಿ ಅಧ್ಯಾದೇಶದ ಅನುಸೂಚಿ ೨ರಲ್ಲಿ ನಿರ್ದಿಷ್ಟಪಡಿಸಲಾದ ಗ್ರಾಮೀಣ ಪ್ರದೇಶಗಳಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ:–

**ಕೋಷ್ಟಕ**

**ಭಾಗ–ಎ**

| | | | |
|---|---|---|---|
| 1. | ಬೆಳಗಾವಿ ಜಿಲ್ಲೆ | 7. | ಬಳ್ಳಾರಿ ಜಿಲ್ಲೆ |
| 2. | ಧಾರವಾಡ ಜಿಲ್ಲೆ | 8. | ಚಿತ್ರದುರ್ಗ ಜಿಲ್ಲೆ |
| 3. | ಬಿಜಾಪುರ ಜಿಲ್ಲೆ | 9. | ತುಮಕೂರು ಜಿಲ್ಲೆ |
| 4. | ಬೀದರ್ ಜಿಲ್ಲೆ | 10. | ಬೆಂಗಳೂರು ಜಿಲ್ಲೆ |
| 5. | ಗುಲ್ಬರ್ಗ ಜಿಲ್ಲೆ | 11. | ಕೋಲಾರ ಜಿಲ್ಲೆ |
| 6. | ರಾಯಚೂರು ಜಿಲ್ಲೆ | 12. | ಮಂಡ್ಯ ಜಿಲ್ಲೆ |

**ಭಾಗ– ಬಿ**

1. ಕರ್ನಾಟಕ ಅರಣ್ಯ ಅಧಿನಿಯಮ, 1963ರ 17ನೇ ಪ್ರಕರಣದ ಮೇರೆಗೆ ಅಧಿಸೂಚಿತವಾದ ಮೀಸಲು ಅರಣ್ಯ.
2. ತೋಟಗಾರಿಕಾ ಇಲಾಖೆ ಅಥವಾ ಕೃಷಿ ವಿಜ್ಞಾನ ವಿಶ್ವವಿದ್ಯಾನಿಲಯದ ನಿಯಂತ್ರಣ ಮತ್ತು ಆಡಳಿತದಲ್ಲಿರುವ ಜಮೀನು.
3. ಕಾಫಿ ಮತ್ತು ಚಹ ಬೆಳೆಯ ಸಂದರ್ಭದಲ್ಲಿ ಪ್ರತಿ ಹೆಕ್ಟೇರಿಗೆ 750ಕ್ಕಿಂತ ಕಡಿಮೆ ಇಲ್ಲದಷ್ಟು ಮತ್ತು ರಬ್ಬರ್ ಬೆಳೆಯ ಸಂದರ್ಭದಲ್ಲಿ 225ಕ್ಕಿಂತ ಕಡಿಮೆ ಇಲ್ಲದಷ್ಟು ಸಸಿಗಳನ್ನು ಹೊಂದಿರುವ ಕಾಫಿ, ಚಹ ಮತ್ತು ರಬ್ಬರನ್ನು ಬೆಳೆದಿರುವ ಜಮೀನು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಪದ್ಮನಾಭ**

ಆಯುಕ್ತರು ಮತ್ತು ಸರ್ಕಾರದ ಕಾರ್ಯದರ್ಶಿ,

ಆಹಾರ ಮತ್ತು ಅರಣ್ಯ ಇಲಾಖೆ.

**(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ದಿನಾಂಕ 21.7.1976ರಲ್ಲಿ 3503ನೇ ಸಂಖ್ಯೆಯಾಗಿ ಪ್ರಕಟಿಸಲಾಗಿದೆ.)**

**IV**

**ಬೆಂಗಳೂರು, ದಿನಾಂಕ 20ನೇ ಜುಲೈ 1976 (ಸಂಖ್ಯೆ ಎಫ್‌ಎಫ್‌ಡಿ 100 ಎಫ್‌ಡಿಪಿ 76(iv)]**

**ಎಸ್.ಓ.1876.–** ಕರ್ನಾಟಕ ಮರಗಳ ಸಂರಕ್ಷಣಾ ಅಧ್ಯಾದೇಶ, 1976ರ (1976ರ ಕರ್ನಾಟಕ ಅಧ್ಯಾದೇಶ 14) 1ನೇ ಪ್ರಕರಣದ (3)ನೇ ಉಪ–ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1976ರ ಜುಲೈ 21ನೇ ದಿನಾಂಕವನ್ನು ಸದರಿ ಅಧ್ಯಾದೇಶದ ಎಲ್ಲ ಉಪಬಂಧಗಳು, ಈ ಮುಂದಿನ ಕೋಷ್ಟಕದ ಬಿ ಭಾಗದಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ಈ ಕೋಷ್ಟಕದ ಎ–ಭಾಗದಲ್ಲಿ ನಮೂದಿಸಲಾಗಿರುವ ತಾಲ್ಲೂಕುಗಳಲ್ಲಿ ಹಾಗೂ ಸದರಿ ಅಧ್ಯಾದೇಶದ ಅನುಸೂಚಿ II೨ರಲ್ಲಿ ನಮೂದಿಸಿರುವ ಗ್ರಾಮೀಣ ಪ್ರದೇಶಗಳಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ:–

**ಕೋಷ್ಟಕ**

**ಭಾಗ–ಎ**

1. ಖಾನಾಪುರ ತಾಲ್ಲೂಕು
2. ಚಿಕ್ಕಮಗಳೂರು ತಾಲ್ಲೂಕು
3. ಕೊಪ್ಪ ತಾಲ್ಲೂಕು
4. ಮೂಡಿಗೆರೆ ತಾಲ್ಲೂಕು
5. ನರಸಿಂಹರಾಜಪುರ ತಾಲ್ಲೂಕು
6. ಶೃಂಗೇರಿ ತಾಲ್ಲೂಕು
7. ಮಡಿಕೇರಿ ತಾಲ್ಲೂಕು
8. ಸೋಮವಾರ ಪೇಟೆ ತಾಲ್ಲೂಕು
9. ವಿರಾಜಪೇಟೆ ತಾಲ್ಲೂಕು
10. ಶಿಗ್ಗಾವಿ ತಾಲ್ಲೂಕು
11. ಹಾನಗಲ್ ತಾಲ್ಲೂಕು
12. ಕಲಘಟಗಿ ತಾಲ್ಲೂಕು
13. ಧಾರವಾಡ ತಾಲ್ಲೂಕು
14.ಅರಕಲ್‌ಗೂಡು ತಾಲ್ಲೂಕು
15.ಸಕಲೇಶಪುರ ತಾಲ್ಲೂಕು
16. ಬೇಲೂರು ತಾಲ್ಲೂಕು
17. ಚಾಮರಾಜನಗರ ತಾಲ್ಲೂಕು
18. ಗುಂಡ್ಲುಪೇಟೆ ತಾಲ್ಲೂಕು
19. ಹೆಗ್ಗಡದೇವನ ಕೋಟೆ ತಾಲ್ಲೂಕು
20. ಹುಣಸೂರು ತಾಲ್ಲೂಕು
21. ಕೊಳ್ಳೆಗಾಲ ತಾಲ್ಲೂಕು
22. ಯಳಂದೂರು ತಾಲ್ಲೂಕು
23. ಪೆರಿಯಾಪಟ್ಟಣ ತಾಲ್ಲೂಕು
24. ಅಂಕೋಲ ತಾಲ್ಲೂಕು
25. ಭಟ್ಕಳ ತಾಲ್ಲೂಕು
26. ಹಳಿಯಾಳ ತಾಲ್ಲೂಕು
27. ಹೊನ್ನಾವರ ತಾಲ್ಲೂಕು
28. ಕಾರವಾರ ತಾಲ್ಲೂಕು
29. ಕುಮಟ ತಾಲ್ಲೂಕು
30. ಮುಂಡಗೋಡು ತಾಲ್ಲೂಕು
31. ಸಿದ್ದಾಪುರ ತಾಲ್ಲೂಕು
32. ಸಿರಸಿ ತಾಲ್ಲೂಕು
33. ಸೂಪಾ ತಾಲ್ಲೂಕು
34. ಯಲ್ಲಾಪುರ ತಾಲ್ಲೂಕು
35. ಭದ್ರಾವತಿ ತಾಲ್ಲೂಕು
36. ಹೊಸನಗರ ತಾಲ್ಲೂಕು
37. ಸಾಗರ ತಾಲ್ಲೂಕು
38. ತರಿಕೆರೆ ತಾಲ್ಲೂಕು
39. ಶಿಕಾರಿಪುರ ತಾಲ್ಲೂಕು
40. ಶಿವಮೊಗ್ಗ ತಾಲ್ಲೂಕು
41. ಸೊರಬ ತಾಲ್ಲೂಕು
42. ತೀರ್ಥಹಳ್ಳಿ ತಾಲ್ಲೂಕು
43. ಬೆಳ್ತಂಗಡಿ ತಾಲ್ಲೂಕು
44. ಕುಂದಾಪುರ ತಾಲ್ಲೂಕು
45. ಕಾರ್ಕಳ ತಾಲ್ಲೂಕು
46. ಪುತ್ತೂರು ತಾಲ್ಲೂಕು
47. ಸುಳ್ಯ ತಾಲ್ಲೂಕು

**ಭಾಗ – ಬಿ**

1. ಕರ್ನಾಟಕ ಅರಣ್ಯ ಅಧಿನಿಯಮ, 1963ರ 17ನೇ ಪ್ರಕರಣದ ಅಡಿಯಲ್ಲಿ ಅಧಿಸೂಚಿತವಾದ ಮೀಸಲು ಅರಣ್ಯ.
2. ತೋಟಗಾರಿಕಾ ಇಲಾಖೆ ಅಥವಾ ಕೃಷಿ ವಿಜ್ಞಾನ ವಿಶ್ವವಿದ್ಯಾನಿಲಯದ ನಿಯಂತ್ರಣ ಮತ್ತು ಆಡಳಿತದಲ್ಲಿರುವ ಜಮೀನು.
3. ಕಾಫಿ ಮತ್ತು ಚಹ ಬೆಳೆಯ ಸಂದರ್ಭದಲ್ಲಿ ಪ್ರತಿ ಹೆಕ್ಟೇರಿಗೆ 750ಕ್ಕಿಂತ ಕಡಿಮೆ ಇಲ್ಲದಷ್ಟು ಮತ್ತು ರಬ್ಬರ್ ಬೆಳೆಯ ಸಂದರ್ಭದಲ್ಲಿ 225ಕ್ಕಿಂತ ಕಡಿಮೆ ಇಲ್ಲದಷ್ಟು ಗಿಡಗಳನ್ನು ಹೊಂದಿರುವ ಕಾಫಿ, ಚಹ ಮತ್ತು ರಬ್ಬರನ್ನು ಸಾಗುವಳಿ ಮಾಡಿರುವ ಜಮೀನು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಪದ್ಮನಾಭ**

ಆಯುಕ್ತರು ಮತ್ತು ಸರ್ಕಾರದ ಕಾರ್ಯದರ್ಶಿ,

ಆಹಾರ ಮತ್ತು ಅರಣ್ಯ ಇಲಾಖೆ.

ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗIV–2ಸಿ (ii) ದಿನಾಂಕ 21.7.1976ರಲ್ಲಿ ಪ್ರಕಟಿಸಲಾಗಿದೆ.)

The above translation of the Karnataka Preservation of Trees Act, 1976 (Karnataka Act 76 of 1976) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

P.R. 340

**ಜಿ.ಕೆ. ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ,

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 10 ರಾಶಾಪ್ರ 2007 ಬೆಂಗಳೂರು, ದಿನಾಂಕ:28ನೇ ಮಾರ್ಚ್ 2007.**

The National Law School of India Act, 1986 (Karnataka Act 22 of 1980) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲ್ಯಾಂಗ್ವೇಜ್ ಆಕ್ಟ್ 1963ರ ಪ್ರಕರನ 5ಎ ರ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ಅಧಿನಿಯಮ, 1986**

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**

20. ಅನುಸೂಚಿಯನ್ನು ತಿದ್ದುಪಡಿ ಮಾಡಲು ಅಧಿಕಾರ

21. ಅಧಿನಿಯಮವು ಅಧ್ಯಾರೋಹಿ ಪರಿಣಾಮವನ್ನು ಹೊಂದಿರುವುದು

22. ನಿರಸನ ಮತ್ತು ಉಳಿಸುವಿಕೆ

**ಅನುಸೂಚಿ**

1. ಪರಿಭಾಷೆಗಳು

2. ಸಾಮಾನ್ಯ ಪರಿಷತ್ತಿನ ಸದಸ್ಯತ್ವ

3. ಅಧ್ಯಕ್ಷ, ಕಾರ್ಯದರ್ಶಿ ಮತ್ತು ಖಜಾಂಚಿ

4. ಸಾಮಾನ್ಯ ಪರಿಷತ್ತಿನ ಸದಸ್ಯರ ಪದಾವಧಿ

5. ಸಾಮಾನ್ಯ ಪರಿಷತ್ತಿನ ಅಧಿಕಾರಗಳು

6. ಸಾಮಾನ್ಯ ಪರಿಷತ್ತಿನ ಸಭೆಗಳು

7. ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯತ್ವ

8. ಕಾರ್ಯನಿರ್ವಹಕ ಪರಿಷತ್ತಿನ ಪದಾವಧಿ

9. ಕಾರ್ಯನಿರ್ವಾಹಕ ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳು

10. ಕಾರ್ಯನಿರ್ವಾಹಕ ಪರಿಷತ್ತಿನ ಸಭೆ

11. ಕಾರ್ಯನಿರ್ವಾಹಕ ಪರಿಷತ್ತಿನಿಂದ ಸ್ಥಾಯಿ ಸಮಿತಿಯ ರಚನೆ ಮತ್ತು ಅಡ್ – ಹಾಕ್ ಸಮಿತಿಗಳ ನೇಮಕಾತಿ

12. ಕಾರ್ಯನಿರ್ವಾಹಕ ಪರಿಷತ್ತು ಅಧಿಕಾರಗಳನ್ನು ಪ್ರತ್ಯಾಯೋಜಿಸುವುದು

13. ಶೈಕ್ಷಣಿಕ ಪರಿಷತ್ತಿನ ಸದಸ್ಯತ್ವ

14. ಶೈಕ್ಷಣಿಕ ಪರಿಷತ್ತಿನ ಅಧಿಕಾರಗಳು ಮತ್ತು ಕರ್ತವ್ಯಗಳು

15. ಶೈಕ್ಷಣಿಕ ಪರಿಷತ್ತಿನ ಸಭೆಗಳ ಕಾರ್ಯವಿಧಾನ

16. ಹಣಕಾಸು ಸಮಿತಿ

17. ಆಯ್ಕೆ ಸಮಿತಿ

18. ಕುಲಪತಿ

19. ವಿಭಾಗಗಳ ಮುಖ್ಯಸ್ಥರು

20. ಕುಲಸಚಿವ

21. ಇತರ ಅಧಿಕಾರಿಗಳು ಮತ್ತು ನೌಕರರು

22. ಭವಿಷ್ಯ ನಿಧಿ, ಉಪದಾನ, ನಿವೃತ್ತಿ ವೇತನ ಮತ್ತು ಯಾವುದೇ ಇತರ ಸೌಲಭ್ಯ ಯೋಜನೆ

23. ವಿದ್ಯಾಲಯದ ನಿಧಿಗಳು

24. ವಾರ್ಷಿಕ ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆ

25. ಹಣಕಾಸು ಅಂದಾಜುಗಳು

26. ವಾರ್ಷಿಕ ವರದಿ

27. ಕರಾರುಗಳನ್ನು ಕಾರ್ಯಗತಗೊಳಿಸುವುದು

28. ವಿದ್ಯಾರ್ಥಿಗಳ ಪ್ರವೇಶಕ್ಕೆ ಅರ್ಹತೆ

29. ವಿದ್ಯಾರ್ಥಿಗಳ ವಾಸಸ್ಥಳ

30. ಗೌರವ ಪದವಿಗಳು

31. ಪದವಿ ಅಥವಾ ಡಿಪ್ಲೋಮವನ್ನು ಹಿಂತೆಗೆದುಕೊಳ್ಳುವುದು

32. ಶಿಸ್ತು

33. ಪುರಸ್ಕೃತ ಪರಿಯೋಜನೆಗಳು

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

I

**1986ರ ಅಧಿನಿಯಮ ಸಂಖ್ಯೆ 22.–** ಭಾರತದ ಬಾರ್ ಕೌನ್ಸಿಲಿನ ಪ್ರಕಾರ್ಯಗಳಲ್ಲಿ ಕಾನೂನು ಶಿಕ್ಷಣದ ಸಂವರ್ಧನೆಯು ಒಂದಾಗಿದೆ. ಆ ಉದ್ದೇಶವನ್ನು ಕಾರ್ಯಗತಗೊಳಿಸಲು ಭಾರತದ ಬಾರ್ ಕೌನ್ಸಿಲ್, ಭಾರತದ ಬಾರ್ ಕೌನ್ಸಿಲ್ ಟ್ರಸ್ಟ್ ಎಂಬ ಒಂದು ಧರ್ಮಾರ್ಥ ಟ್ರಸ್ಟನ್ನು ಸೃಜಿಸಿದ್ದು, ಅದು ಕರ್ನಾಟಕದಲ್ಲಿ ಭಾರತ ರಾಷ್ಟ್ರೀಯ ಕಾನೂನು ವಿದ್ಯಾಲಯ ಸಂಘ ಎಂಬ ಒಂದು ಸಂಘವನ್ನು ನೋಂದಾಯಿಸಿತು. ಆ ಸಂಘವು ಪದವಿ, ಡಿಪ್ಲೋಮ ಮೊದಲಾದವುಗಳನ್ನು ಪ್ರದಾನ ಮಾಡುವ ಅಧಿಕಾರಗಳೊಂದಿಗೆ, ಭಾರತ ರಾಷ್ಟ್ರೀಯ ಕಾನೂನು ವಿದ್ಯಾಲಯವನ್ನು ನಿರ್ವಹಿಸುವುದಕ್ಕೆ ಅಗತ್ಯವಿರುವ ನಿಯಮಗಳನ್ನು ರಚಿಸಿತು ಮತ್ತು ಅದು ತನ್ನ ಉದ್ದೇಶಗಳನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಲು ಸಾಧ್ಯವಾಗುವಂತೆ, ಶಾಸನದ ಮೂಲಕ ವಿಶ್ವವಿದ್ಯಾನಿಲಯದಂತೆ ವಿದ್ಯಾಲಯವನ್ನು ಸ್ಥಾಪಿಸುವ ಮೂಲಕ ನೆರವು ನೀಡುವಂತೆ ಕೋರಿತು. ರಾಜ್ಯ ಸರ್ಕಾರವು, ರಾಜ್ಯದಲ್ಲಿ ಅಂಥ ರಾಷ್ಟ್ರ ಮಟ್ಟದ ಒಂದು ಸಂಸ್ಥೆಯ ಸ್ಥಾಪನೆಗೆ ಪ್ರೋತ್ಸಾಹಿಸುವುದು ಅಪೇಕ್ಷಣೀಯವೆಂದು ಪರಿಗಣಿಸಿದೆ.

ಆದ್ದರಿಂದ ಈ ವಿಧೇಯಕ.

(1986ರ ವಿಧಾನಸಭಾ ವಿಧೇಯಕ ಸಂಖ್ಯೆ 28 ರಿಂದ ಪಡೆಯಲಾಗಿದೆ.)

II

**1993ರ ತಿದ್ದುಪಡಿ ಮಾಡುವ ಅಧಿನಿಯಮ 3.–** ಭಾರತ ರಾಷ್ಟ್ರೀಯ ಕಾನೂನು ವಿದ್ಯಾಲಯ ಅಧಿನಿಯಮ, 1986ರ 9ನೇ ಪ್ರಕರಣದ ಅಡಿಯಲ್ಲಿ ಸಾಮಾನ್ಯ ಪರಿಷತ್ತನ್ನು ವಿದ್ಯಾಲಯದ ಸರ್ವೋಚ್ಚ ಪ್ರಾಧಿಕಾರ ಎಂಬುದಾಗಿ ವಿವರಿಸಲಾಗಿದೆ. ಸಾಮಾನ್ಯ ಪರಿಷತ್ತಿನ ಪಾತ್ರವು ಸಲಹೆ ನೀಡುವ ಸ್ವರೂಪದ್ದಾಗಿರುವುದರಿಂದ ಸಾಮಾನ್ಯ ಪರಿಷತ್ತನ್ನು ಪ್ರಧಾನ ಸಲಹಾ ನಿಕಾಯ ಎಂಬುದಾಗಿ ವಿವರಿಸಲು ಪ್ರಸ್ತಾವಿಸಲಾಗಿದೆ ಮತ್ತು ಸಾಮಾನ್ಯ ಪರಿಷತ್ತಿನ ಅಧಿಕಾರಗಳನ್ನು ಸೂಕ್ತ ರೀತಿಯಲ್ಲಿ ಮಾರ್ಪಾಟುಗೊಳಿಸುವುದು ಸಹ ಅಗತ್ಯವೆಂದು ಪರಿಗಣಿಸಲಾಗಿದೆ. ಈ ಪ್ರಸ್ತಾವನೆಯು ವಿಶ್ವವಿದ್ಯಾನಿಲಯದ ಅನುದಾನಗಳ ಆಯೋಗವು ಮಾಡಿದ ಸಲಹೆಗೆ ಅನುಸಾರವಾಗಿದೆ.

ಈ ವಿಧೇಯಕವನ್ನು, ಭಾರತ ರಾಷ್ಟ್ರೀಯ ಕಾನೂನು ವಿದ್ಯಾಲಯ (ತಿದ್ದುಪಡಿ) ಅಧ್ಯಾದೇಶ, 1982ಕ್ಕೆ ಬದಲಾಗಿ ಮಂಡಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1992ರ ವಿಧಾನಸಭಾ ವಿಧೇಯಕ ಸಂಖ್ಯೆ 20 ರಿಂದ ಪಡೆಯಲಾಗಿದೆ.)

III

**2004ರ ತಿದ್ದುಪಡಿ ಮಾಡುವ ಅಧಿನಿಯಮ 15.–** ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ವಿಶ್ವವಿದ್ಯಾನಿಲಯದ ನಿರ್ದೇಶಕರ ನೇಮಕಾತಿಗಾಗಿ ಹೆಸರುಗಳ ಪಟ್ಟಿಯನ್ನು ತಯಾರಿಸುವುದಕ್ಕಾಗಿ ರಚಿಸಿದ ಶೋಧನಾ ಸಮಿತಿಯು ದಿನಾಂಕ 28.1.2000 ದಂದು ಮಾಡಿದ ಸಲಹೆಗಳ ಆಧಾರದ ಮೇಲೆ, "ನಿರ್ದೇಶಕ" ಮತ್ತು "ಸಂದರ್ಶಕ" ಎಂಬ ಹುದ್ದೆಗಳ ಹೆಸರುಗಳನ್ನು ಇತರೆ ವಿಶ್ವವಿದ್ಯಾನಿಲಯಗಳಲ್ಲಿರುವಂತೆ ಅನುಕ್ರಮವಾಗಿ "ಕುಲಪತಿ" ಮತ್ತು "ಕುಲಾಧಿಪತಿ" ಎಂದು ಬದಲಾಯಿಸಲು ಭಾರತ ರಾಷ್ಟ್ರೀಯ ಕಾನೂನು ವಿದ್ಯಾಲಯ ಅಧಿನಿಯಮ, 1986ಕ್ಕೆ ತಿದ್ದುಪಡಿ ತರುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2004ರ ವಿಧಾನ ಪರಿಷತ್ ವಿಧೇಯಕ ಸಂಖ್ಯೆ 7 ರಿಂದ ಪಡೆಯಲಾಗಿದೆ.)

**1986ರ ಕರ್ನಾಟಕ ಅಧಿನಿಯಮ ಸಂಖ್ಯೆ 22**

(1986ರ ಮೇ ಹದಿಮೂರನೇ ದಿನದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ.)

**ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ಅಧಿನಿಯಮ, 1986**

(1986ರ ಏಪ್ರಿಲ್ ಮೂವತ್ತನೇ ದಿನದಂದು ರಾಜ್ಯಪಾಲರ ಅನುಮೋದನೆಯನ್ನು ಪಡೆದಿದೆ)

(ಅಧಿನಿಯಮ ಸಂಖ್ಯೆ 1993ರ 3 ಮತ್ತು 2004ರ 15 ಇವುಗಳ ಮೂಲಕ ತಿದ್ದುಪಡಿಯಾದಂತೆ)

**ಬೆಂಗಳೂರಿನಲ್ಲಿ ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ವಿಶ್ವ ವಿದ್ಯಾನಿಲಯದ ಸ್ಥಾಪನೆಗಾಗಿ ಮತ್ತು ನಿಗಮನಕ್ಕಾಗಿ ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.**

ಭಾರತದ ಬಾರ್ ಕೌನ್ಸಿಲಿನ ಪ್ರಕಾರ್ಯಗಳು ಕಾನೂನು ಶಿಕ್ಷಣದ ಸಂವರ್ಧನೆಯನ್ನು ಒಳಗೊಳ್ಳುವುದರಿಂದ;

ಮತ್ತು ಭಾರತದ ಬಾರ್ ಕೌನ್ಸಿಲ್, ಸದರಿ ಪ್ರಕಾರ್ಯವನ್ನು ನಿರ್ವಹಿಸಲು ಭಾರತದ ಬಾರ್ ಕೌನ್ಸಿಲ್ ಟ್ರಸ್ಟ್ ಎಂದು ಕರೆಯಲಾಗುವ ಒಂದು ಸಾರ್ವಜನಿಕ ಧರ್ಮಾರ್ಥ ಟ್ರಸ್ಟನ್ನು ರಚಿಸಿದ್ದು, ಅದರ ಉದ್ದೇಶಗಳಲ್ಲಿ ಇತರ ವಿಷಯಗಳ ಜೊತೆಗೆ ಭಾರತದಲ್ಲಿ ಒಂದು ಮಾದರಿ ಕಾನೂನು ಕಾಲೇಜನ್ನು ಸ್ಥಾಪಿಸುವುದು, ನಿರ್ವಹಿಸುವುದು ಮತ್ತು ನಡೆಸುವುದು ಒಳಗೊಳ್ಳುವುದರಿಂದ;

ಮತ್ತು, ಭಾರತದ ಬಾರ್ ಕೌನ್ಸಿಲ್ ಟ್ರಸ್ಟ್, ಟ್ರಸ್ಟಿನ ಸದರಿ ಉದ್ದೇಶಗಳನ್ನು ಕಾರ್ಯಗತಗೊಳಿಸಲು, ಬೆಂಗಳೂರಿನಲ್ಲಿ ಒಂದು ಶಾಖಾ ಕಚೇರಿಯನ್ನು ತೆರೆಯಿತು ಮತ್ತು ಅದು ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 17) ಅಡಿಯಲ್ಲಿ ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ಸಂಘ ಎಂಬ ಹೆಸರಿನಲ್ಲಿ ಮತ್ತು ಅಂಕಿತದಲ್ಲಿ ಒಂದು ಸಂಘವನ್ನು ನೋಂದಾಯಿಸಿತು, ಅದರ ಉದ್ದೇಶಗಳಲ್ಲಿ ಇತರ ವಿಷಯಗಳ ಜೊತೆಗೆ, ಬೆಂಗಳೂರಿನಲ್ಲಿ ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ಎಂಬ ಹೆಸರಿನಲ್ಲಿ ಪದವಿಗಳು, ಡಿಪ್ಲೋಮಗಳು ಮತ್ತು ಶೈಕ್ಷಣಿಕ ವಿಶಿಷ್ಟತೆಗಳನ್ನು ನೀಡುವ ಅಧಿಕಾರಗಳೂ ಸೇರಿದಂತೆ ಕಾನೂನಿನ ಉನ್ನತ ಶಿಕ್ಷಣದ ಬೋಧನಾ ಮತ್ತು ಸಂಶೋಧನಾ ಸಂಸ್ಥೆಯನ್ನು ಸ್ಥಾಪಿಸುವುದು, ನಿರ್ವಹಿಸುವುದು ಮತ್ತು ಅಭಿವೃದ್ಧಿಪಡಿಸುವುದು ಒಳಗೊಳ್ಳುವುದರಿಂದ;

ಮತ್ತು ಮೇಲಿನ ಉದ್ದೇಶವನ್ನು ಮುಂದುವರಿಸಿಕೊಂಡು ಬರಲು ಮತ್ತು ಸದರಿ ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯವನ್ನು ನಿರ್ವಹಿಸಲು ಸದರಿ ಸಂಘವು ವಿದ್ಯಾಲಯಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ಪ್ರಾಧಿಕಾರಗಳ ರಚನೆಗಾಗಿ ಹಾಗೂ ಇತರ ವಿಷಯಗಳಿಗಾಗಿ ಉಪಬಂಧ ಕಲ್ಪಿಸಿ ನಿಯಮಗಳನ್ನು ರಚಿಸಿರುವುದರಿಂದ;

ಮತ್ತು ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ಸಂಘವು ತನ್ನ ಉದ್ದೇಶಗಳನ್ನು ಮತ್ತು ಪ್ರಕಾರ್ಯಗಳನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಲು ಸಾಧ್ಯವಾಗುವಂತೆ, ಸದರಿ ನಿಯಮಗಳಿಗೆ ಅನುಸಾರವಾಗಿ ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಲು ರಾಜ್ಯ ಸರ್ಕಾರವನ್ನು ಕೋರಿರುವುದರಿಂದ;

ಮತ್ತು ಕರ್ನಾಟಕ ರಾಜ್ಯದಲ್ಲಿ ಅಂಥ ರಾಷ್ಟ್ರಮಟ್ಟದ ಒಂದು ಸಂಸ್ಥೆಯ ಸ್ಥಾಪನೆಗೆ ಪ್ರೋತ್ಸಾಹಿಸುವುದು ಅವಶ್ಯಕವೆಂದು ಪರಿಗಣಿಸಿರುವುದರಿಂದ;

ಮತ್ತು ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವುದು ಯುಕ್ತವೆಂದು ಭಾವಿಸಿರುವುದರಿಂದ;

ಭಾರತ ಗಣರಾಜ್ಯದ ಮೂವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು.

**1. ಚಿಕ್ಕ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ಅಧಿನಿಯಮ, 1986 ಎಂದು ಕರೆಯತಕ್ಕದ್ದು.

(2) ಇದು 1986ರ ಜನವರಿ ಒಂಬತ್ತನೇ ದಿನದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(1) "ವಿದ್ಯಾವಿಷಯಕ ಪರಿಷತ್ತು" ಎಂದರೆ ವಿದ್ಯಾಲಯದ ಶೈಕ್ಷಣಿಕ ಪರಿಷತ್ತು ;

(2) "ಭಾರತದ ಬಾರ್ ಕೌನ್ಸಿಲ್" ಎಂದರೆ ನ್ಯಾಯವಾದಿಗಳ ಅಧಿನಿಯಮ, 1961ರ (1961ರ ಕೇಂದ್ರ ಅಧಿನಿಯಮ ಸಂಖ್ಯೆ 25) ಅಡಿಯಲ್ಲಿ ರಚಿತವಾದ ಭಾರತದ ಬಾರ್ ಕೌನ್ಸಿಲ್;

(3) "ಭಾರತದ ಬಾರ್ ಕೌನ್ಸಿಲ್ ಟ್ರಸ್ಟ್" ಎಂದರೆ ಭಾರತದ ಬಾರ್ ಕೌನ್ಸಿಲಿನಿಂದ ಸೃಜಿತವಾದ ಒಂದು ಸಾರ್ವಜನಿಕ ಧರ್ಮಾರ್ಥ ಟ್ರಸ್ಟ್ ಆಗಿರುವ ಭಾರತದ ಬಾರ್ ಕೌನ್ಸಿಲ್ ಟ್ರಸ್ಟ್;

(4) "ಅಧ್ಯಕ್ಷ" ಎಂದರೆ ಸಾಮಾನ್ಯ ಪರಿಷತ್ತಿನ ಅಧ್ಯಕ್ಷ;

(5) [1]["ಕುಲಪತಿ" ಎಂದರೆ ವಿದ್ಯಾಲಯದ ಕುಲಪತಿ;][1]

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(6) "ಕಾರ್ಯನಿರ್ವಾಹಕ ಪರಿಷತ್ತು" ಎಂದರೆ ವಿದ್ಯಾಲಯದ ಕಾರ್ಯನಿರ್ವಾಹಕ ಪರಿಷತ್ತು;

(7) "ಸಾಮಾನ್ಯ ಪರಿಷತ್ತು" ಎಂದರೆ ವಿದ್ಯಾಲಯದ ಸಾಮಾನ್ಯ ಪರಿಷತ್ತು;

(8) "ಕುಲಸಚಿವ" ಎಂದರೆ ವಿದ್ಯಾಲಯದ ಕುಲಸಚಿವ;

(9) "ವಿನಿಯಮಗಳು" ಎಂದರೆ 31ನೇ ಖಂಡದ ಅಡಿಯಲ್ಲಿ ರಚಿಸಲಾದ ವಿದ್ಯಾಲಯದ ವಿನಿಯಮಗಳು;

(10) "ವಿದ್ಯಾಲಯ" ಎಂದರೆ 3ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ವಿಶ್ವವಿದ್ಯಾನಿಲಯ;

(11) "ಅನುಸೂಚಿ" ಎಂದರೆ ಈ ಅಧಿನಿಯಮಕ್ಕೆ ಅನುಬಂಧಿಸಲಾದ ಅನುಸೂಚಿ;

(12) "ಸಂಘ" ಎಂದರೆ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960 (1960ರ ಕರ್ನಾಟಕ ಅಧಿನಿಯಮ ಸಂಖ್ಯೆ 17)ರ ಅಡಿಯಲ್ಲಿ ನೋಂದಾಯಿಸಲಾದ ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ಸಂಘ; ಮತ್ತು

(13) [1]["ಕುಲಾಧಿಪತಿ " ಎಂದರೆ ವಿದ್ಯಾಲಯದ ಕುಲಾಧಿಪತಿ][1];

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**3. ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ವಿಶ್ವವಿದ್ಯಾನಿಲಯದ ಸ್ಥಾಪನೆ ಮತ್ತು ನಿಗಮನ.–** (1) ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿಯಮಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯದಲ್ಲಿ ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ವಿಶ್ವವಿದ್ಯಾನಿಲಯ ಎಂಬ ಹೆಸರಿನ ಒಂದು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸತಕ್ಕದ್ದು. ಅದು [1][ಕುಲಪತಿ][1], ಸಾಮಾನ್ಯ ಪರಿಷತ್ತು, ಕಾರ್ಯನಿರ್ವಾಹಕ ಪರಿಷತ್ತು, ವಿದ್ಯಾವಿಷಯಕ ಪರಿಷತ್ತು ಮತ್ತು ಕುಲಸಚಿವರನ್ನು ಒಳಗೊಂಡಿರತಕ್ಕದ್ದು.

(2) ವಿದ್ಯಾಲಯವು, ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಸ್ವತ್ತನ್ನು ಆರ್ಜಿಸುವ ಮತ್ತು ಧಾರಣಮಾಡುವ ಮತ್ತು ಕರಾರು ಮಾಡಿಕೊಳ್ಳುವ ಅಧಿಕಾರದೊಂದಿಗೆ ಶಾಶ್ವತ ಉತ್ತರಾಧಿಕಾರವನ್ನು ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಅದು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

(3) ವಿದ್ಯಾಲಯದಿಂದ ಅಥವಾ ಅದರ ವಿರುದ್ಧ ಹೂಡಲಾಗುವ ಎಲ್ಲ ದಾವೆಗಳು ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ ವಾದ ಪತ್ರಗಳಿಗೆ [1][ಕುಲಪತಿ][1] ಸಹಿ ಮಾಡತಕ್ಕದ್ದು ಮತ್ತು ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂಥ ದಾವೆಗಳಲ್ಲಿನ ಮತ್ತು ವ್ಯವಹರಣೆಗಳಲ್ಲಿನ ಎಲ್ಲ ಆದೇಶಿಕೆಗಳನ್ನು [1][ಕುಲಪತಿ][1] ಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(4) ವಿದ್ಯಾಲಯದ ಕೇಂದ್ರ ಕಚೇರಿಯು ಬೆಂಗಳೂರಿನಲ್ಲಿರತಕ್ಕದ್ದು.

**4. ವಿದ್ಯಾಲಯದ ಉದ್ದೇಶಗಳು, ಇತ್ಯಾದಿ.–** (1) ಕಾನೂನು ಶಿಕ್ಷಣ ಮತ್ತು ತಿಳಿವಳಿಕೆಯನ್ನು ಮತ್ತು ಕಾನೂನು ಪ್ರಕ್ರಿಯೆಗಳನ್ನು ಮತ್ತು ರಾಷ್ಟ್ರದ ಅಭಿವೃದ್ಧಿಯಲ್ಲಿ ಅವುಗಳ ಪಾತ್ರವನ್ನು ಮುನ್ನೆಡೆಸುವುದು ಮತ್ತು ಪ್ರಸಾರ ಮಾಡುವುದು, ವಕಾಲತು, ಕಾನೂನು ಸೇವೆಗಳು, ಶಾಸನ ರಚನೆ, ಕಾನೂನು ಸುಧಾರಣೆ ಮತ್ತು ಅಂಥವುಗಳ ಸಂಬಂಧದಲ್ಲಿ ಕುಶಲತೆಗಳನ್ನು ಬೆಳೆಸಿಕೊಳ್ಳುವ ಮೂಲಕ ಕಾನೂನು ಕ್ಷೇತ್ರದಲ್ಲಿ ಸಮಾಜ ಸೇವೆ ಮಾಡುವ ಹೊಣೆಗಾರಿಕೆಯ ಪ್ರಜ್ಞೆಯನ್ನು ವಿದ್ಯಾರ್ಥಿಗಳಲ್ಲಿ ಮತ್ತು

ಸಂಶೋಧನಾ ಪಂಡಿತರಲ್ಲಿ ಬೆಳೆಸುವುದು, ಕಾನೂನು ತಿಳಿವಳಿಕೆಯನ್ನು ವೃದ್ಧಿಗೊಳಿಸಲು ಮತ್ತು ಕಾನೂನು ಮತ್ತು ಕಾನೂನು ಆದೇಶಿಕೆಗಳನ್ನು ಸಾಮಾಜಿಕ ಬೆಳವಣಿಗೆಯ ಸಮರ್ಥ ಸಾಧನಗಳನ್ನಾಗಿ ಮಾಡಲು ಉಪನ್ಯಾಸಗಳನ್ನು, ವಿಚಾರ ಸಂಕಿರಣಗಳನ್ನು, ವಿಚಾರಗೋಷ್ಠಿಗಳನ್ನು ಮತ್ತು ಸಮ್ಮೇಳನಗಳನ್ನು ಸಂಘಟಿಸುವುದು, ಪರೀಕ್ಷೆಗಳನ್ನು ನಡೆಸುವುದು ಮತ್ತು ಪದವಿಗಳನ್ನು ಮತ್ತು ಇತರ ಶೈಕ್ಷಣಿಕ ವೈಶಿಷ್ಟ್ಯತೆಗಳನ್ನು ಪ್ರದಾನ ಮಾಡುವುದು ಮತ್ತು ವಿದ್ಯಾಲಯದ ಎಲ್ಲ ಅಥವಾ ಯಾವುವೇ ಉದ್ದೇಶಗಳನ್ನು ಸಾಧಿಸಲು ಪ್ರಾಸಂಗಿಕವಾದ, ಅವಶ್ಯವಾದ ಅಥವಾ ಅನುಕೂಲಕರವಾದಂಥ ಎಲ್ಲ ಕಾರ್ಯವನ್ನು ಮಾಡುವುದು ವಿದ್ಯಾಲಯದ ಉದ್ದೇಶಗಳಾಗಿರತಕ್ಕದ್ದು.

(2) ವಿದ್ಯಾಲಯವು ಎಲ್ಲ ಧರ್ಮಗಳ ಯಾವುದೇ ಜನಾಂಗ, ಪಂಥ, ಜಾತಿ ಅಥವಾ ವರ್ಗಗಳ ಭೇದವಿಲ್ಲದೆ ಯಾವುದೇ ಲಿಂಗವಾಗಿರಲಿ, ಎಲ್ಲ ವ್ಯಕ್ತಿಗಳಿಗೆ ಮುಕ್ತವಾಗಿರತಕ್ಕದ್ದು ಮತ್ತು ಅವನನ್ನು ಅಧ್ಯಾಪಕನನ್ನಾಗಿ ಅಥವಾ ವಿದ್ಯಾರ್ಥಿಯನ್ನಾಗಿ ಅಲ್ಲಿಗೆ ಪ್ರವೇಶಿಸುವಂತೆ ಮಾಡುವ ಅಥವಾ ಅಲ್ಲಿ ಯಾವುದೇ ಪದವನ್ನು ಧಾರಣ ಮಾಡುವ ಅಥವಾ ಅಲ್ಲಿ ಪದವೀಧರನನ್ನಾಗಿ ಮಾಡುವ ಅಥವಾ ಅಲ್ಲಿನ ಯಾವುದೇ ವಿಶೇಷ ಹಕ್ಕುಗಳನ್ನು ಅನುಭೋಗಿಸುವ ಅಥವಾ ಚಲಾಯಿಸುವ ಸಲುವಾಗಿ ಯಾವುದೇ ಧಾರ್ಮಿಕ ನಂಬಿಕೆಯ ಅಥವಾ ವೃತ್ತೀಯ ಸ್ವರೂಪದ ಪರೀಕ್ಷೆಯನ್ನು ವ್ಯಕ್ತಿಯ ಮೇಲೆ ಒಡ್ಡುವುದು ಕಾನೂನುಬದ್ಧವಾಗಿರತಕ್ಕದ್ದಲ್ಲ.

5. **ವಿದ್ಯಾಲಯದ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** ವಿದ್ಯಾಲಯದ ಅಧಿಕಾರಗಳು ಮತ್ತು ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು,–

(i) ವಿದ್ಯಾಲಯದ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಅಗತ್ಯವಿರುವ ಸಂಶೋಧನೆ, ಶಿಕ್ಷಣ ಮತ್ತು ಬೋಧನೆಗಳನ್ನು ನೀಡುವ ವಿದ್ಯಾಲಯದ ಮತ್ತು ಅಂಥ ಕೇಂದ್ರಗಳ ಆಡಳಿತವನ್ನು ನಡೆಸುವುದು ಮತ್ತು ನಿರ್ವಹಣೆ ಮಾಡುವುದು;

(ii) ಕಾನೂನಿಗೆ ಸಂಬಂಧಪಟ್ಟಂತೆ ವಿದ್ಯಾಲಯವು ಸೂಕ್ತವೆಂದು ಭಾವಿಸುವಂಥ ತಿಳಿವಳಿಕೆ ಅಥವಾ ಶಿಕ್ಷಣದ ಶಾಖೆಗಳಲ್ಲಿ ಬೋಧನೆಗೆ ಅವಕಾಶ ಕಲ್ಪಿಸುವುದು ಮತ್ತು ಸಂಶೋಧನೆಗೆ ಹಾಗೂ ಕಾನೂನು ತಿಳಿವಳಿಕೆಯ ಅಭಿವೃದ್ಧಿಗೆ ಮತ್ತು ಪ್ರಸಾರಕ್ಕೆ ಅವಕಾಶ ಕಲ್ಪಿಸುವುದು;

(iii) ವಿಶ್ವವಿದ್ಯಾನಿಲಯದ ವ್ಯಾಪ್ತಿಗೆ ಹೊರಗಿನ ಬೋಧನೆ ಮತ್ತು ವಿಸ್ತರಣಾ ಸೇವೆಗಳನ್ನು ಸಂಘಟಿಸುವುದು ಮತ್ತು ಕೈಗೊಳ್ಳುವುದು;

(iv) ವಿದ್ಯಾಲಯವು ನಿರ್ಧರಿಸಬಹುದಾದಂಥ ಷರತ್ತುಗಳಿಗೊಳಪಟ್ಟು ಪರೀಕ್ಷೆಗಳನ್ನು ನಡೆಸುವುದು ಮತ್ತು ಡಿಪ್ಲೋಮಗಳು ಅಥವಾ ಪ್ರಮಾಣಪತ್ರಗಳನ್ನು ನೀಡುವುದು, ಮತ್ತು ವ್ಯಕ್ತಿಗಳಿಗೆ ಪದವಿಗಳನ್ನು ಮತ್ತು ಇತರ ಶೈಕ್ಷಣಿಕ ವೈಶಿಷ್ಟ್ಯತೆಗಳನ್ನು ನೀಡುವುದು ಮತ್ತು ಸದ್ಭಾವನೆಯ ಮತ್ತು ಸಾಕಷ್ಟು ಕಾರಣಕ್ಕಾಗಿ ಯಾವುವೇ ಅಂಥ ಡಿಪ್ಲೋಮಗಳು, ಪ್ರಮಾಣಪತ್ರಗಳು ಅಥವಾ ಇತರ ಶೈಕ್ಷಣಿಕ ವೈಶಿಷ್ಟ್ಯತೆಗಳನ್ನು ಹಿಂತೆಗೆದುಕೊಳ್ಳುವುದು;

(v) ಗೌರವ ಪದವಿಗಳನ್ನು ಅಥವಾ ಇತರ ಶೈಕ್ಷಣಿಕ ವೈಶಿಷ್ಟ್ಯತೆಗಳನ್ನು ವಿನಿಯಮಗಳಲ್ಲಿ ವಿಧಿಸಿರುವ ರೀತಿಯಲ್ಲಿ ಪ್ರದಾನ ಮಾಡುವುದು;

(vi) ಫೀಜುಗಳು ಮತ್ತು ಇತರ ಚಾರ್ಜುಗಳನ್ನು ನಿಗದಿಪಡಿಸುವುದು, ತಗಾದೆ ಮಾಡುವುದು ಮತ್ತು ಸ್ವೀಕರಿಸುವುದು;

(vii) ಸಭಾಂಗಣಗಳು ಮತ್ತು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸುವುದು, ನಿರ್ವಹಣೆ ಮಾಡುವುದು ಮತ್ತು ವಿದ್ಯಾಲಯದ ವಿದ್ಯಾರ್ಥಿಗಳಿಗೆ ವಾಸದ ಸ್ಥಳಗಳಿಗೆ ಮಾನ್ಯತೆ ನೀಡುವುದು ಮತ್ತು ಅಂಥ ಯಾವುವೇ ವಾಸದ ಸ್ಥಳಗಳಿಗೆ ನೀಡಲಾದ ಅಂಥ ಮಾನ್ಯತೆಯನ್ನು ಹಿಂತೆಗೆದುಕೊಳ್ಳುವುದು;

(viii) ವಿದ್ಯಾಲಯದ ಅಭಿಪ್ರಾಯದಲ್ಲಿ ಅದರ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಅವಶ್ಯವೆನಿಸುವಂಥ ಸಂಶೋಧನೆ ಮತ್ತು ಬೋಧನೆಗಾಗಿ ವಿಶೇಷ ಕೇಂದ್ರಗಳು, ವಿಶೇಷ ಪರಿಣತಿಯ ಅಧ್ಯಯನ ಕೇಂದ್ರಗಳು ಅಥವಾ ಇತರ ಘಟಕಗಳನ್ನು ಸ್ಥಾಪಿಸುವುದು;

(ix) ವಾಸಸ್ಥಳಗಳ ಮೇಲ್ವಿಚಾರಣೆ ಮಾಡುವುದು ಮತ್ತು ನಿಯಂತ್ರಿಸುವುದು ಮತ್ತು ವಿದ್ಯಾಲಯದ ವಿದ್ಯಾರ್ಥಿಗಳ ಶಿಸ್ತನ್ನು ನಿಯಂತ್ರಿಸುವುದು ಮತ್ತು ಅವರ ಆರೋಗ್ಯ ವೃದ್ಧಿಗಾಗಿ ವ್ಯವಸ್ಥೆಗಳನ್ನು ಮಾಡುವುದು;

(x) ಮಹಿಳಾ ವಿದ್ಯಾರ್ಥಿಗಳಿಗೆ ವಾಸಸ್ಥಳ, ಶಿಸ್ತು ಮತ್ತು ಬೋಧನೆಯ ಸಂಬಂಧದಲ್ಲಿ ಅಂಥ ಏರ್ಪಾಟುಗಳನ್ನು ಮಾಡುವುದು;

(xi) ಶೈಕ್ಷಣಿಕ, ತಾಂತ್ರಿಕ, ಆಡಳಿತಾತ್ಮಕ, ಲಿಪಿಕ ಮತ್ತು ಇತರ ಹುದ್ದೆಗಳನ್ನು ಸೃಜಿಸುವುದು ಮತ್ತು ಆ ಹುದ್ದೆಗಳಿಗೆ ನೇಮಕಗಳನ್ನು ಮಾಡುವುದು;

(xii) ವಿದ್ಯಾಲಯದ ಉದ್ಯೋಗಿಗಳಲ್ಲಿ ಶಿಸ್ತನ್ನು ನಿಯಂತ್ರಿಸುವುದು ಮತ್ತು ಜಾರಿಗೊಳಿಸುವುದು ಮತ್ತು ಅವಶ್ಯವೆಂದು ಭಾವಿಸಬಹುದಾದಂಥ ಶಿಸ್ತು ಕ್ರಮಗಳನ್ನು ಕೈಗೊಳ್ಳುವುದು;

(xiii) ವಿದ್ಯಾಲಯಕ್ಕೆ ಅಗತ್ಯವಿರುವ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು, ರೀಡರುಗಳು, ಉಪನ್ಯಾಸಕರು ಮತ್ತು ಯಾವುದೇ ಇತರ ಬೋಧನೆ, ಶೈಕ್ಷಣಿಕ ಅಥವಾ ಸಂಶೋಧನಾ ಹುದ್ದೆಗಳನ್ನು ಸೃಜಿಸುವುದು;

(xiv) ವ್ಯಕಿಗಳನ್ನು ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು, ರೀಡರುಗಳು, ಉಪನ್ಯಾಸಕರು ಅಥವಾ ಅನ್ಯಥಾ ವಿದ್ಯಾಲಯದ ಬೋಧಕರು ಮತ್ತು ಸಂಶೋಧಕರು ಎಂಬುದಾಗಿ ನೇಮಕ ಮಾಡುವುದು ;

(xv) ಫೆಲೋಶಿಪ್‌ಗಳು, ವಿದ್ಯಾರ್ಥಿನೇತನಗಳು, ಬಹುಮಾನಗಳು, ಮತ್ತು ಪದಕಗಳನ್ನು ಸೃಜಿಸುವುದು ಮತ್ತು ನೀಡುವುದು ;

(xvi) ಸಂಶೋಧನೆಯ ಮತ್ತು ಇತರ ಕೃತಿಗಳನ್ನು ಮುದ್ರಣ ಮಾಡಿಸುವುದು, ಮರು ಮುದ್ರಣ ಮಾಡಿಸುವುದು ಮತ್ತು ಪ್ರಕಟಣೆಗೆ ಅವಕಾಶ ಕಲ್ಪಿಸುವುದು ಮತ್ತು ವಸ್ತು ಪ್ರದರ್ಶನಗಳನ್ನು ಏರ್ಪಡಿಸುವುದು ;

(xvii) ಕಾನೂನು, ನ್ಯಾಯ ಮತ್ತು ಸಾಮಾಜಿಕ ಅಭಿವೃದ್ಧಿಯ ಎಲ್ಲ ಅಂಶಗಳಲ್ಲಿ ಸಂಶೋಧನೆಯನ್ನು ಪುರಸ್ಕರಿಸುವುದು ಮತ್ತು ಕೈಗೊಳ್ಳುವುದು ;

(xviii) ವಿದ್ಯಾಲಯವು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಒಪ್ಪಿಕೊಳ್ಳಬಹುದಾದಂಥ ಉದ್ದೇಶಗಳಿಗಾಗಿ ಕಾನೂನು, ನ್ಯಾಯ, ಸಾಮಾಜಿಕ ಅಭಿವೃದ್ಧಿ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಶಿಕ್ಷಣ, ತರಬೇತಿ ಮತ್ತು ಸಂಶೋಧನೆಯ ವಿಷಯಗಳಲ್ಲಿ ಯಾವುದೇ ಇತರ ಸಂಸ್ಥೆಯೊಂದಿಗೆ ಸಹಕರಿಸುವುದು ;

(xix) ವಿದ್ಯಾಲಯವು ಹೊಂದಿರುವಂಥಹವೇ ಉದ್ದೇಶಗಳನ್ನು ಪೂರ್ಣವಾಗಿ ಅಥವಾ ಭಾಗಶಃ ಹೊಂದಿರುವ ಪ್ರಪಂಚದ ಯಾವುದೇ ಭಾಗದಲ್ಲಿರುವ ಉನ್ನತ ಶಿಕ್ಷಣದ ಸಂಸ್ಥೆಗಳೊಂದಿಗೆ, ಬೋಧಕರು ಮತ್ತು ವಿದ್ವಾಂಸರನ್ನು ವಿನಿಮಯ ಮಾಡಿಕೊಳ್ಳುವ ಮೂಲಕ ಮತ್ತು ಸಾಮಾನ್ಯವಾಗಿ, ಸಾಮಾನ್ಯ ಉದ್ದೇಶಗಳಿಗೆ ಅನುಕೂಲಕರವಾಗುವಂತಹ ರೀತಿಯಲ್ಲಿ ಸಹಕರಿಸುವುದು;

(xx) ವಿದ್ಯಾಲಯದ ವೆಚ್ಚವನ್ನು ನಿಯಂತ್ರಿಸುವುದು ಮತ್ತು ಲೆಕ್ಕಪತ್ರಗಳನ್ನು ನಿರ್ವಹಿಸುವುದು;

(xxi) ವಿದ್ಯಾಲಯದ ಆವರಣದಲ್ಲಿ ಅಥವಾ ಬೇರೆ ಕಡೆಯಲ್ಲಿ ವಿದ್ಯಾಲಯವು ಅಗತ್ಯವೆಂದು ಪರಿಗಣಿಸುವಂಥ ತರಗತಿಯ ಕೊಠಡಿಗಳನ್ನು ಮತ್ತು ಅಧ್ಯಯನದ ಸಭಾಂಗಣಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು ಮತ್ತು ಅವುಗಳನ್ನು ಸಂಪೂರ್ಣವಾಗಿ ಸುಸಜ್ಜಿತಗೊಳಿಸುವುದು ಮತ್ತು ವಿದ್ಯಾಲಯಕ್ಕೆ ಅನುಕೂಲಕರವೆಂದು ಮತ್ತು ಅವಶ್ಯವೆಂದು ಕಂಡುಬರಬಹುದಾದಂಥ ಗ್ರಂಥಾಲಯಗಳನ್ನು ಮತ್ತು ವಾಚನಾಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(xxii) ವಿದ್ಯಾಲಯದ ಉದ್ದೇಶಕ್ಕಾಗಿ ಮತ್ತು ವಿದ್ಯಾಲಯವು ಯಾವ ಧ್ಯೇಯಗಳಿಗಾಗಿ ಸ್ಥಾಪಿತವಾಯಿತೋ ಆ ಧ್ಯೇಯಗಳಿಗೆ ಸುಸಂಗತವಾಗಿ ಅನುದಾನಗಳನ್ನು, ಧನ ಸಹಾಯವನ್ನು, ವಂತಿಗೆಗಳನ್ನು, ದೇಣಿಗೆಗಳನ್ನು ಮತ್ತು ದಾನಗಳನ್ನು ಸ್ವೀಕರಿಸುವುದು;

(xxiii) ವಿದ್ಯಾಲಯದ ಉದ್ದೇಶಕ್ಕಾಗಿ ಅಗತ್ಯ ಅಥವಾ ಅನುಕೂಲವಾಗಬಹುದಾದ ಯಾವುದೇ ಜಮೀನು ಅಥವಾ ಕಟ್ಟಡ ಅಥವಾ ಕಾಮಗಾರಿಗಳನ್ನು ಅದು ಸೂಕ್ತವೆಂದು ಮತ್ತು ಸರಿಯೆಂದು ಭಾವಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಖರೀದಿಸುವುದು, ಗುತ್ತಿಗೆಗೆ ತೆಗೆದುಕೊಳ್ಳುವುದು ಅಥವಾ ದಾನವಾಗಿ ಅಥವಾ ಅನ್ಯಥಾ ಅಂಗೀಕರಿಸುವುದು ಮತ್ತು ಅಂಥ ಯಾವುದೇ ಕಟ್ಟಡ ಅಥವಾ ಕಾಮಗಾರಿಗಳನ್ನು ನಿರ್ಮಾಣ ಮಾಡುವುದು ಅಥವಾ ಮಾರ್ಪಾಟು ಮಾಡುವುದು ಮತ್ತು ನಿರ್ವಹಿಸುವುದು;

(xxiv) ವಿದ್ಯಾಲಯದ ಹಿತಾಸಕ್ತಿಗೆ ಮತ್ತು ಕಾರ್ಯಚಟುವಟಿಕೆಗಳಿಗೆ ಬಾಧಕವಾಗದಂತೆ ಅದು ಯೋಗ್ಯವೆಂದು ಮತ್ತು ಸೂಕ್ತವೆಂದು ಭಾವಿಸುವಂಥ ನಿಬಂಧನೆಗಳ ಮೇಲೆ ವಿದ್ಯಾಲಯದ ಚರ ಮತ್ತು ಸ್ಥಿರ ಆಸ್ತಿಯ ಎಲ್ಲ ಅಥವಾ ಯಾವುದೇ ಭಾಗವನ್ನು ಮಾರಾಟ, ವಿನಿಮಯ, ಗುತ್ತಿಗೆ ಅಥವಾ ಅನ್ಯಥಾ ವಿಲೆ ಮಾಡುವುದು;

(xxv) ಭಾರತ ಸರ್ಕಾರದ ಮತ್ತು ಇತರ ಪ್ರಾಮಿಸರಿ ನೋಟುಗಳು, ವಿನಿಮಯ ಪತ್ರಗಳು, ಚೆಕ್‌ಗಳು ಅಥವಾ ಇತರ ವರ್ಗಾವಣೀಯ ಲಿಖಿತ ಪತ್ರಗಳು – ಇವುಗಳನ್ನು ಡ್ರಾ ಮಾಡುವುದು, ಮತ್ತು ಅಂಗೀಕರಿಸುವುದು, ಮಾಡಿಕೊಳ್ಳುವುದು ಮತ್ತು ಹಿಂಬರಹ ಮಾಡುವುದು, ಸೋಡಿ ಬಿಡುವುದು ಮತ್ತು ವರ್ಗಾವಣೆ ಮಾಡುವುದು;

(xxvi) ವಿದ್ಯಾಲಯಕ್ಕೆ ಸೇರಿದ ಅಥವಾ ವಿದ್ಯಾಲಯದ ಉದ್ದೇಶಕ್ಕಾಗಿ ಆರ್ಜಿಸಬೇಕಾಗಿರುವ ಸರ್ಕಾರಿ ಭದ್ರತೆಗಳನ್ನು ಒಳಗೊಂಡಂತೆ ಚರ ಅಥವಾ ಸ್ಥಿರ ಆಸ್ತಿಗಳ ಸಂಬಂಧದಲ್ಲಿ ಹಸ್ತಾಂತರಣ, ವರ್ಗಾವಣೆ, ಮರುಹಸ್ತಾಂತರಣ, ಅಡಮಾನಗಳು, ಗುತ್ತಿಗೆಗಳು, ಲೈಸೆನ್ಸುಗಳು ಮತ್ತು ಒಪ್ಪಂದಗಳನ್ನು ನಿರ್ವಹಿಸುವುದು;

(xxvii) ಲಿಖಿತ ಪತ್ರವನ್ನು ಬರೆದುಕೊಡುವ ಅಥವಾ ವಿದ್ಯಾಲಯದ ಯಾವುದೇ ವ್ಯವಹಾರವನ್ನು ನಡೆಸುವ ಸಲುವಾಗಿ ಅದು ಸೂಕ್ತವೆಂದು ಭಾವಿಸುವ ಯಾರೇ ವ್ಯಕ್ತಿಯನ್ನು ನೇಮಕ ಮಾಡುವುದು;

(xxviii) ವಿದ್ಯಾಲಯದ ಯಾವುವೇ ತರಗತಿಗಳು ಅಥವಾ ವಿಭಾಗಗಳನ್ನು ನಡೆಸುವುದನ್ನು ಕೈಬಿಡುವುದು ಅಥವಾ ನಿಲ್ಲಿಸುವುದು;

(xxix) ಅನುದಾನಗಳನ್ನು ಪಡೆಯಲು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳು, ವಿಶ್ವವಿದ್ಯಾನಿಲಯ ಅನುದಾನಗಳ ಆಯೋಗ ಅಥವಾ ಇತರ ಪ್ರಾಧಿಕಾರಗಳೊಂದಿಗೆ ಯಾವುದೇ ಒಪ್ಪಂದವನ್ನು ಮಾಡಿಕೊಳ್ಳುವುದು;

(xxx) ಯುಕ್ತವೆಂದು ಭಾವಿಸುವಂಥ ನಿಬಂಧನೆಗಳ ಮೇಲೆ ಯಾವುದೇ ವಿಧದ ನಗದು ಅನುದಾನಗಳನ್ನು, ಭದ್ರತೆಗಳನ್ನು ಅಥವಾ ಆಸ್ತಿಯನ್ನು ಅಂಗೀಕರಿಸುವುದು;

(xxxi) ವಿದ್ಯಾಲಯದ ಎಲ್ಲ ಅಥವಾ ಯಾವುದೇ ಸ್ವತ್ತು ಮತ್ತು ಆಸ್ತಿಗಳಲ್ಲಿ ಕಂಡುಬಂದ ಅಥವಾ ಅದರ ಮೇಲೆ ಆಧಾರಿತವಾದ ಬಾಂಡುಗಳು, ಅಡಮಾನಗಳು, ಪ್ರಾಮಿಸರಿ ನೋಟುಗಳು ಅಥವಾ ಇತರ ಬಾಧ್ಯತೆಗಳು ಅಥವಾ ಭದ್ರತೆಗಳ ಮೇಲೆ ಅಥವಾ ಯಾವುವೇ ಭದ್ರತೆಗಳಿಲ್ಲದೆ ಮತ್ತು ಅದು ಸೂಕ್ತವೆಂದು ಭಾವಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಹಣವನ್ನು ಸಂಗ್ರಹಿಸುವುದು ಮತ್ತು ಹಣವನ್ನು ಸಾಲ ಪಡೆಯುವುದು ಮತ್ತು ಹಣವನ್ನು ಸಂಗ್ರಹಿಸಲು ಪ್ರಾಸಂಗಿಕವಾದ ಎಲ್ಲ ವೆಚ್ಚಗಳನ್ನು ವಿದ್ಯಾಲಯದ ನಿಧಿಯಿಂದ ಸಂದಾಯ ಮಾಡುವುದು ಮತ್ತು ಸಾಲ ಪಡೆದ ಯಾವುದೇ ಹಣವನ್ನು ಮರುಸಂದಾಯ ಮಾಡುವುದು ಮತ್ತು ಅದರಿಂದ ವಿಮೋಚನೆ ಹೊಂದುವುದು ;

(xxxii) ವಿದ್ಯಾಲಯದ ನಿಧಿಯನ್ನು ಅಥವಾ ವಿದ್ಯಾಲಯಕ್ಕೆ ವಹಿಸಿಕೊಡಲಾದ ಹಣವನ್ನು ಅದು ಸೂಕ್ತವೆಂದು ಭಾವಿಸುವ ಅಂಥ ಭದ್ರತೆಗಳಲ್ಲಿ ಅಥವಾ ಭದ್ರತೆಗಳ ಮೇಲೆ ಮತ್ತು ಅಂಥ ರೀತಿಯಲ್ಲಿ ತೊಡಗಿಸುವುದು ಮತ್ತು ಯಾವುದೇ ಬಂಡವಾಳ ಹೂಡಿಕೆಯನ್ನು ಸ್ಥಳಾಂತರಗೊಳಿಸುವುದು;

(xxxiii) ವಿದ್ಯಾಲಯದ ವ್ಯವಹಾರಗಳು ಮತ್ತು ಆಡಳಿತವನ್ನು ನಿಯಂತ್ರಿಸಲು ಕಾಲಕಾಲಕ್ಕೆ ಅಗತ್ಯವೆಂದು ಪರಿಗಣಿಸಲಾಗುವಂಥ ವಿನಿಯಮಗಳನ್ನು ಮಾಡುವುದು ಹಾಗೂ ಅವುಗಳನ್ನು ಬದಲಾಯಿಸುವುದು, ಪರಿವರ್ತಿಸುವುದು ಮತ್ತು ಹಿಂತೆಗೆದುಕೊಳ್ಳುವುದು.

(xxxiv) ಶೈಕ್ಷಣಿಕ, ತಾಂತ್ರಿಕ, ಆಡಳಿತಾತ್ಮಕ ಮತ್ತು ಇತರ ಸಿಬ್ಬಂದಿಗಳ ಅನುಕೂಲಕ್ಕಾಗಿ ವಿನಿಯಮಗಳಿಂದ ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು, ಅದು ಸೂಕ್ತವೆಂದು ಭಾವಿಸಬಹುದಾದಂಥ ನಿವೃತ್ತಿ ವೇತನ, ವಿಮೆ, ಭವಿಷ್ಯ ನಿಧಿಯನ್ನು ಮತ್ತು ಉಪದಾನವನ್ನು ರಚಿಸುವುದು ಮತ್ತು ವಿದ್ಯಾಲಯದ ಯಾರೇ ನೌಕರರ ಅನುಕೂಲಕ್ಕಾಗಿ ಅದು ಸೂಕ್ತವೆಂದು ಭಾವಿಸುವಂಥ ಅನುದಾನಗಳನ್ನು ನೀಡಲು ಮತ್ತು ವಿದ್ಯಾಲಯದ ಸಿಬ್ಬಂದಿ ಮತ್ತು ವಿದ್ಯಾರ್ಥಿಗಳಿಗೆ ಅನುಕೂಲವಾಗುವುದೆಂದು ಪರಿಗಣಿಸಲಾದ ಸಂಘಗಳು, ಸಂಸ್ಥೆಗಳು, ನಿಧಿಗಳು, ನ್ಯಾಸಗಳು ಮತ್ತು ವಾಹನಗಳ ಸ್ಥಾಪನೆಗೆ ಮತ್ತು ಬೆಂಬಲಕ್ಕೆ ನೆರವಾಗುವುದು;

(xxxv) ಅದರ ಎಲ್ಲ ಅಧಿಕಾರಗಳನ್ನು ಅಥವಾ ಯಾವುವೇ ಅಧಿಕಾರವನ್ನು ವಿದ್ಯಾಲಯದ [1][ಕುಲಪತಿ][1]ಗೆ ಅಥವಾ ಯಾವುವೇ ಸಮಿತಿಗೆ ಅಥವಾ ಯಾವುದೇ ಉಪ ಸಮಿತಿಗೆ ಅಥವಾ ಅದರ ನಿಕಾಯದ ಯಾರೇ ಒಬ್ಬ ಅಥವಾ ಹೆಚ್ಚು ಸದಸ್ಯರಿಗೆ ಅಥವಾ ಅದರ ಅಧಿಕಾರಿಗಳಿಗೆ ಪ್ರತ್ಯಾಯೋಜಿಸುವುದು;

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(xxxvi) ಮೇಲೆ ಹೇಳಿದ ಉದ್ದೇಶಗಳನ್ನು ಅಥವಾ ಅವುಗಳಲ್ಲಿ ಯಾವುದಾದರೂ ಒಂದನ್ನು ಸಾಧಿಸಲು ಅಥವಾ ವಿಸ್ತರಿಸಲು ಅಗತ್ಯವೆಂದು, ಅನುಕೂಲಕರವೆಂದು ಅಥವಾ ಪ್ರಾಸಂಗಿಕವೆಂದು ವಿದ್ಯಾಲಯವು ಪರಿಗಣಿಸುವಂಥ ಇತರ ಎಲ್ಲ ಕೆಲಸ ಕಾರ್ಯಗಳನ್ನು ಮಾಡುವುದು.

**6. ವಿದ್ಯಾಲಯದ ಬೋಧನೆ.–** (1) ವಿನಿಯಮಗಳಿಂದ ನಿಯಮಿಸಲಾದ ಪಠ್ಯಕ್ರಮಗಳಿಗನುಸಾರವಾಗಿ, ಸಾಮಾನ್ಯ ಪರಿಷತ್ತಿನ ನಿಯಂತ್ರಣದ ಅಡಿಯಲ್ಲಿ ವಿದ್ಯಾಲಯದ ಪದವಿಗಳು, ಡಿಪ್ಲೋಮಗಳು ಮತ್ತು ಪ್ರಮಾಣ ಪತ್ರಗಳ ಸಂಬಂಧದಲ್ಲಿ ಎಲ್ಲ ಅಂಗೀಕೃತ ಬೋಧನೆಯನ್ನು ವಿದ್ಯಾಲಯದ ಅಧ್ಯಾಪಕರುಗಳ ಮೂಲಕ ನಡೆಸತಕ್ಕದ್ದು.

(2) ಪಠ್ಯಕ್ರಮ ಮತ್ತು ಪಠ್ಯ ವಿಷಯ ಮತ್ತು ಅಂಥ ಬೋಧನೆಯ ವ್ಯವಸ್ಥೆ ಮಾಡಲು ಹೊಣೆಗಾರರಾದ ಪ್ರಾಧಿಕಾರಗಳು ವಿನಿಯಮಗಳ ಮೂಲಕ ನಿಯಮಿಸಲಾದಂತೆ ಇರತಕ್ಕದ್ದು.

**7. ವಿದ್ಯಾಲಯದ [1][ಕುಲಾಧಿಪತಿ][1].–** (1) ಸಂಘದಿಂದ ನಾಮನಿರ್ದೇಶಿತನಾದ ಒಬ್ಬ ನ್ಯಾಯಾಧೀಶನು, ವಿದ್ಯಾಲಯದ [1][ಕುಲಾಧಿಪತಿ][1] ಯಾಗಿರತಕ್ಕದ್ದು:

ಪರಂತು, ಭಾರತದ ಮುಖ್ಯ ನ್ಯಾಯಾಧೀಶ ತನ್ನ ಒಪ್ಪಿಗೆಯನ್ನು ನೀಡಿದರೆ, ಆತನನ್ನು [1][ಕುಲಾಧಿಪತಿ][1] ಎಂಬುದಾಗಿ ನಾಮನಿರ್ದೇಶನ ಮಾಡತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) [1][ಕುಲಾಧಿಪತಿ][1]ಯು ತಾನು ನಿರ್ದೇಶಿಸಬಹುದಾದಂಥ ವ್ಯಕ್ತಿ ಅಥವಾ ವ್ಯಕ್ತಿಗಳು ವಿದ್ಯಾಲಯದ, ಅದರ ಕಟ್ಟಡಗಳ, ಗ್ರಂಥಾಲಯಗಳ ಮತ್ತು ಸಾಧನ ಸಾಮಗ್ರಿಗಳ ಮತ್ತು ವಿದ್ಯಾಲಯವು ನಡೆಸುತ್ತಿರುವ ಯಾವುದೇ ಸಂಸ್ಥೆಯ ಮತ್ತು ವಿದ್ಯಾಲಯವು ನಡೆಸುವ ಅಥವಾ ಮಾಡುವ ಪರೀಕ್ಷೆಗಳು, ಬೋಧನೆ ಮತ್ತು ಇತರ ಕೆಲಸಗಳನ್ನು ಪರಿಶೀಲಿಸುವಂತೆ ಮಾಡಲು ಮತ್ತು ಅದೇ ರೀತಿ ವಿದ್ಯಾಲಯದ ಆಡಳಿತ ಮತ್ತು ಹಣಕಾಸಿಗೆ ಸಂಬಂಧಿಸಿದ ಯಾವುವೇ ವಿಷಯಗಳ ಸಂಬಂಧದಲ್ಲಿ ವಿಚಾರಣೆಯನ್ನು ನಡೆಸುವಂತೆ ಮಾಡಲು ಹಕ್ಕು ಹೊಂದಿರತಕ್ಕದ್ದು.

(3) [1][ಕುಲಾಧಿಪತಿ][1] ಯು ಪ್ರತಿಯೊಂದು ಸಂದರ್ಭದಲ್ಲಿ, ಪರಿಶೀಲನೆ ಮತ್ತು ವಿಚಾರಣೆ ಮಾಡಿಸುವ ತನ್ನ ಉದ್ದೇಶದ ಬಗ್ಗೆ ವಿದ್ಯಾಲಯಕ್ಕೆ ನೋಟೀಸು ನೀಡತಕ್ಕದ್ದು ಮತ್ತು ವಿದ್ಯಾಲಯವು ಒಬ್ಬ ಪ್ರತಿನಿಧಿಯನ್ನು ನೇಮಕ ಮಾಡಲು ಹಕ್ಕು ಹೊಂದಿರತಕ್ಕದ್ದು ಮತ್ತು ಅವನು ಅಂಥ ಪರಿಶೀಲನೆಯಲ್ಲಿ ಅಥವಾ ವಿಚಾರಣೆಯಲ್ಲಿ ಹಾಜರಾಗಲು ಮತ್ತು ಅಹವಾಲನ್ನು ಹೇಳಿಕೊಳ್ಳಲು ಹಕ್ಕನ್ನು ಹೊಂದಿರತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(4) [1][ಕುಲಾಧಿಪತಿ][1] ಯು ಅಂಥ ಪರಿಶೀಲನೆಯ ಅಥವಾ ವಿಚಾರಣೆಯ ಫಲಿತಾಂಶಕ್ಕೆ ಸಂಬಂಧಿಸಿದಂತೆ [1][ಕುಲಪತಿ][1] ಗೆ ತಿಳಿಸಬಹುದು ಮತ್ತು [1][ಕುಲಪತಿ][1]ಯು [1][ಕುಲಾಧಿಪತಿ][1]ಯ ಅಭಿಪ್ರಾಯಗಳನ್ನು ಹಾಗೂ ಆ ಬಗ್ಗೆ ಕೈಗೊಳ್ಳಬೇಕಾಗಿರುವ ಕ್ರಮಗಳನ್ನು ಕುರಿತು ನೀಡಿರಬಹುದಾದಂಥ ಸಲಹೆಗಳನ್ನು ಸಾಮಾನ್ಯ ಪರಿಷತ್ತಿಗೆ ತಿಳಿಸತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(5) ಸಾಮಾನ್ಯ ಪರಿಷತ್ತು, ಅಂಥ ಪರಿಶೀಲನೆ ಅಥವಾ ವಿಚಾರಣೆಯ ಫಲವಾಗಿ ಅದು ಪ್ರಸ್ತಾವಿಸುವಂಥ ಅಥವಾ ಕೈಗೊಂಡಿರುವಂಥ ಕ್ರಮ ಯಾವುದಾದರೂ ಇದ್ದರೆ, ಅದನ್ನು [1][ಕುಲಪತಿ][1]ಯ ಮೂಲಕ [1][ಕುಲಾಧಿಪತಿ][1]ಗೆ ತಿಳಿಸತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**8. ವಿದ್ಯಾಲಯದ ಪ್ರಾಧಿಕಾರಗಳು.–** ಈ ಮುಂದಿನವು ವಿದ್ಯಾಲಯದ ಪ್ರಾಧಿಕಾರಗಳಾಗಿರತಕ್ಕದ್ದು:–

1) ಸಾಮಾನ್ಯ ಪರಿಷತ್ತು;

2) ಕಾರ್ಯನಿರ್ವಾಹಕ ಪರಿಷತ್ತು;

3) ಶೈಕ್ಷಣಿಕ ಪರಿಷತ್ತು;

4) ಹಣಕಾಸು ಸಮಿತಿ; ಮತ್ತು

5) ವಿದ್ಯಾಲಯದ ಪ್ರಾಧಿಕಾರಗಳೆಂದು ಘೋಷಿಸಬಹುದಾದಂಥ ಇತರ ಪ್ರಾಧಿಕಾರಗಳು.

**9. ಸಾಮಾನ್ಯ ಪರಿಷತ್ತು.–** (1) ಸಾಮಾನ್ಯ ಪರಿಷತ್ತು, ವಿದ್ಯಾಲಯದ [1][ಪ್ರಧಾನ ಸಲಹಾ ನಿಕಾಯ][1] ವಾಗಿರತಕ್ಕದ್ದು.

1. 1993ರ ಅಧಿನಿಯಮ ಸಂಖ್ಯೆ 3ರ ಮೂಲಕ ದಿನಾಂಕ 14.5.1992 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**10. ಕಾರ್ಯನಿರ್ವಾಹಕ ಪರಿಷತ್ತು.–** (1) ಕಾರ್ಯನಿರ್ವಾಹಕ ಪರಿಷತ್ತು, ವಿದ್ಯಾಲಯದ ಪ್ರಧಾನ ಕಾರ್ಯನಿರ್ವಾಹಕ ನಿಕಾಯವಾಗಿರತಕ್ಕದ್ದು.

(2) ವಿದ್ಯಾಲಯದ ಆಡಳಿತ, ವ್ಯವಸ್ಥಾಪನೆ ಮತ್ತು ನಿಯಂತ್ರಣವು ಮತ್ತು ಅದರ ಆದಾಯವು ಕಾರ್ಯನಿರ್ವಾಹಕ ಪರಿಷತ್ತಿನಲ್ಲಿ ನಿಹಿತವಾಗಿರತಕ್ಕದ್ದು. ಅದು ವಿದ್ಯಾಲಯದ ಸ್ವತ್ತು ಮತ್ತು ನಿಧಿಯನ್ನು ನಿಯಂತ್ರಿಸತಕ್ಕದ್ದು ಮತ್ತು ಅದರ ಆಡಳಿತ ನಡೆಸತಕ್ಕದ್ದು.

**11. ಶೈಕ್ಷಣಿಕ ಪರಿಷತ್ತು.–** ಶೈಕ್ಷಣಿಕ ಪರಿಷತ್ತು ವಿದ್ಯಾಲಯದ ಶೈಕ್ಷಣಿಕ ನಿಕಾಯವಾಗಿರತಕ್ಕದ್ದು ಮತ್ತು ಈ ಅಧಿನಿಯಮದ ಮತ್ತು ವಿನಿಯಮಗಳ ಉಪಬಂಧಗಳಿಗೆ ಒಳಪಟ್ಟು, ವಿದ್ಯಾಲಯದ ಬೋಧನೆ, ಶಿಕ್ಷಣ ಮತ್ತು ಪರೀಕ್ಷೆಯ ಗುಣಮಟ್ಟಗಳ ನಿಯಂತ್ರಣ ಮತ್ತು ಸಾಮಾನ್ಯ ವಿನಿಯಮದ ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ಅದು ಈ ಅಧಿನಿಯಮದ ಅಥವಾ ವಿನಿಯಮಗಳ ಮೂಲಕ ಅದಕ್ಕೆ ಪ್ರದಾನ ಮಾಡಬಹುದಾದ ಅಥವಾ ಅದರ ಮೇಲೆ ವಿಧಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು. ಅದು ಎಲ್ಲ ಶೈಕ್ಷಣಿಕ ವಿಷಯಗಳ ಮೇಲೆ ಕಾರ್ಯನಿರ್ವಾಹಕ ಪರಿಷತ್ತಿಗೆ ಸಲಹೆ ನೀಡುವ ಹಕ್ಕನ್ನು ಹೊಂದಿರತಕ್ಕದ್ದು.

**12. ವಿದ್ಯಾಲಯದ ಅಧಿಕಾರಿಗಳು.–** ಈ ಮುಂದಿನವರು ವಿದ್ಯಾಲಯದ ಅಧಿಕಾರಿಗಳಾಗಿರತಕ್ಕದ್ದು:–

ಎ) [1][ಕುಲಪತಿ][1];

1. 2004ರ ಅಧಿನಿಯಮ ಸಂಖ್ಯೆ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಬಿ) ವಿಭಾಗಗಳ ಮುಖ್ಯಸ್ಥರು;

ಸಿ) ಕುಲಸಚಿವ; ಮತ್ತು

ಡಿ) ವಿನಿಯಮಗಳಿಂದ ನಿಯಮಿಸಬಹುದಾದಂಥ ಇತರ ಅಧಿಕಾರಿಗಳು.

**13. ವಿನಿಯಮಗಳು.–** (1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಕಾರ್ಯನಿರ್ವಾಹಕ ಪರಿಷತ್ತು ತನ್ನಲ್ಲಿ ನಿಹಿತಗೊಂಡಿರುವ ಎಲ್ಲ ಇತರ ಅಧಿಕಾರಗಳ ಜೊತೆಗೆ ವಿದ್ಯಾಲಯದ ವ್ಯವಹಾರಗಳ ಆಡಳಿತಕ್ಕಾಗಿ ಮತ್ತು ವ್ಯವಸ್ಥಾಪನೆಗಾಗಿ ಉಪಬಂಧ ಕಲ್ಪಿಸಲು ವಿನಿಯಮಗಳನ್ನು ರಚಿಸುವ ಅಧಿಕಾರವನ್ನು ಹೊಂದಿರತಕ್ಕದ್ದು:

ಪರಂತು, ಕಾರ್ಯನಿರ್ವಾಹಕ ಪರಿಷತ್ತು, ವಿದ್ಯಾಲಯದ ಯಾವುದೇ ಪ್ರಾಧಿಕಾರದ ಸ್ಥಾನಮಾನ, ಅಧಿಕಾರಗಳು ಅಥವಾ ರಚನೆಗೆ ಬಾಧಕವುಂಟುಮಾಡುವ ಯಾವುದೇ ವಿನಿಯಮವನ್ನು ಪ್ರಸ್ತಾವಿತ ಬದಲಾವಣೆಗಳಿಗೆ ತನ್ನ ಅಭಿಪ್ರಾಯವನ್ನು ಲಿಖಿತದಲ್ಲಿ ಅಭಿವ್ಯಕ್ತಿಗೊಳಿಸಲು ಅಂಥ ಪ್ರಾಧಿಕಾರಕ್ಕೆ ಒಂದು ಅವಕಾಶವನ್ನು ಕೊಡುವವರೆಗೆ ರಚಿಸತಕ್ಕದ್ದಲ್ಲ ಮತ್ತು ಹಾಗೆ ಅಭಿವ್ಯಕ್ತಿಗೊಳಿಸಲಾದ ಯಾವುದೇ ಅಭಿಪ್ರಾಯವನ್ನು ಕಾರ್ಯನಿರ್ವಾಹಕ ಪರಿಷತ್ತು ಪರಿಗಣಿಸತಕ್ಕದ್ದು:

ಮತ್ತೂ ಪರಂತು, ಶೈಕ್ಷಣಿಕ ಪರಿಷತ್ತಿನ ಪೂರ್ವಾನುಮತಿಯನ್ನು ಪಡೆದ ಹೊರತು, ಕಾರ್ಯನಿರ್ವಾಹಕ ಪರಿಷತ್ತು, ಈ ಮುಂದಿನ ಯಾವುದೇ ವಿಷಯದ ಅಥವಾ ಎಲ್ಲ ವಿಷಯಗಳ ಮೇಲೆ ಬಾಧಕವುಂಟುಮಾಡುವ ಯಾವುದೇ ವಿನಿಯಮವನ್ನು ರಚಿಸತಕ್ಕದ್ದಲ್ಲ, ತಿದ್ದುಪಡಿ ಮಾಡತಕ್ಕದ್ದಲ್ಲ ಅಥವಾ ನಿರಸನಗೊಳಿಸತಕ್ಕದ್ದಲ್ಲ; ಎಂದರೆ:–

ಎ) ಶೈಕ್ಷಣಿಕ ಪರಿಷತ್ತಿನ ರಚನೆ, ಅಧಿಕಾರಗಳು ಮತ್ತು ಕರ್ತವ್ಯಗಳು;

ಬಿ) ವಿದ್ಯಾಲಯದ ಪಠ್ಯ ಕ್ರಮಗಳು ಮತ್ತು ಅದಕ್ಕೆ ಸಂಬಂಧಪಟ್ಟ ಶೈಕ್ಷಣಿಕ ಕಾರ್ಯಕ್ರಮಗಳ ಸಂಬಂಧದಲ್ಲಿ ಬೋಧನೆಗೆ ವ್ಯವಸ್ಥೆ ಮಾಡಲು ಹೊಣೆಗಾರರಾಗಿರುವ ಪ್ರಾಧಿಕಾರಿಗಳು;

ಸಿ) ಪದವಿಗಳು, ಡಿಪ್ಲೊಮಗಳು, ಪ್ರಮಾಣ ಪತ್ರಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಹಿಂತೆಗೆದುಕೊಳ್ಳುವುದು;

ಡಿ) ವ್ಯಾಸಂಗ ವಿಭಾಗಗಳು, ವಿಭಾಗಗಳು, ಸಭಾಂಗಣಗಳು ಮತ್ತು ಸಂಸ್ಥೆಗಳ ಸ್ಥಾಪನೆ ಮತ್ತು ರದ್ದಿಯಾತಿ;

ಇ) ಫೆಲೋಶಿಪ್, ವಿದ್ಯಾರ್ಥಿವೇತನ, ಶಿಷ್ಯವೇತನ, ವಸ್ತು ಪ್ರದರ್ಶನಗಳು, ಪದಕಗಳು, ಪಾರಿತೋಷಕಗಳನ್ನು ಸ್ಥಾಪಿಸುವುದು;

ಎಫ್) ಪರೀಕ್ಷಕರ ನೇಮಕಾತಿಯ ಷರತ್ತುಗಳು ಮತ್ತು ವಿಧಾನಗಳು ಅಥವಾ ಪರೀಕ್ಷೆಗಳ ಅಥವಾ ಅಧ್ಯಯನದ ಯಾವುದೇ ಇತರ ವ್ಯಾಸಂಗಕ್ರಮವನ್ನು ನಡೆಸುವುದು ಅಥವಾ ಅದರ ಗುಣಮಟ್ಟ;

ಜಿ) ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುವ ಅಥವಾ ಪ್ರವೇಶದ ವಿಧಾನ;

ಹೆಚ್) ಪರೀಕ್ಷೆಗಳನ್ನು ವಿಶ್ವವಿದ್ಯಾಲಯದ ಪರೀಕ್ಷೆಗಳಿಗೆ ಸಮಾನವೆಂದು ಮನ್ನಣೆನೀಡುವುದು;

(2) ಶೈಕ್ಷಣಿಕ ಪರಿಷತ್ತು, ಮೇಲಿನ (ಎ) ಯಿಂದ (ಎಚ್) ನಲ್ಲಿ ನಿರ್ದಿಷ್ಟಪಡಿಸಿದ ಎಲ್ಲ ವಿಷಯಗಳ ಮೇಲೆ ಮತ್ತು ಈ ಸಂಬಂಧದಲ್ಲಿ ಪ್ರಾಸಂಗಿಕವಾಗಿರುವ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳ ಬಗ್ಗೆ ವಿನಿಯಮಗಳನ್ನು ಪ್ರಸ್ತಾವಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

(3) ಶೈಕ್ಷಣಿಕ ಪರಿಷತ್ತು ಪ್ರಸ್ತಾವಿಸಿದ ವಿನಿಯಮದ ಕರಡನ್ನು ಕಾರ್ಯನಿರ್ವಾಹಕ ಪರಿಷತ್ತು ತಿರಸ್ಕರಿಸಿದಲ್ಲಿ ಶೈಕ್ಷಣಿಕ ಪರಿಷತ್ತು [1][ಕುಲಾಧಿಪತಿ][1]ಗೆ ಅಪೀಲು ಮಾಡಿಕೊಳ್ಳಬಹುದು ಮತ್ತು [1][ಕುಲಾಧಿಪತಿ][1]ಯು ಆದೇಶದ ಮೂಲಕ, ಸಾಮಾನ್ಯ ಪರಿಷತ್ತಿನ ಮುಂದಿನ ಸಭೆಯಲ್ಲಿ ಅನುಮೋದನೆಗಾಗಿ ಪ್ರಸ್ತಾವಿತ ವಿನಿಯಮವನ್ನು ಮಂಡಿಸುವಂತೆ ಮತ್ತು ಸಾಮಾನ್ಯ ಪರಿಷತ್ತಿನ ಅಂಥ ಅನುಮೋದನೆಯು ಇತ್ಯರ್ಥದಲ್ಲಿರುವಾಗ ಅದು ಆ ಆದೇಶದಲ್ಲಿ ನಿರ್ದಿಷ್ಟಪಡಿಸಿರಬಹುದಾದಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದೆಂದು ನಿರ್ದೇಶಿಸಬಹುದು:

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಆ ವಿನಿಯಮಗಳನ್ನು ಅಂಥ ಸಭೆಯಲ್ಲಿ ಸಾಮಾನ್ಯ ಪರಿಷತ್ತು ಅನುಮೋದಿಸದಿದ್ದರೆ ಅದು ಜಾರಿಯಲ್ಲಿರುವುದು ನಿಂತು ಹೋಗತಕ್ಕದ್ದು.

(4) ಕಾರ್ಯನಿರ್ವಾಹಕ ಪರಿಷತ್ತು ರಚಿಸಿದ ಎಲ್ಲ ವಿನಿಯಮಗಳನ್ನು, ಸಾಧ್ಯವಾದಷ್ಟು ಬೇಗನೆ, [1][ಕುಲಾಧಿಪತಿ][1] ಗೆ ಮತ್ತು ಸಾಮಾನ್ಯ ಪರಿಷತ್ತಿಗೆ, ಅದರ ಮುಂದಿನ ಸಭೆಯಲ್ಲಿ ಅನುಮೋದನೆಗಾಗಿ ಒಪ್ಪಿಸತಕ್ಕದ್ದು ಮತ್ತು ಸಾಮಾನ್ಯ ಪರಿಷತ್ತು, ಹಾಜರಿರುವ ಸದಸ್ಯರ ಎರಡನೇ ಮೂರಕ್ಕಿಂತ ಕಡಿಮೆ ಇಲ್ಲದಂಥ ಬಹುಮತದಿಂದ ಅಂಗೀಕರಿಸಿದ ನಿರ್ಣಯದಿಂದ ಕಾರ್ಯನಿರ್ವಾಹಕ ಪರಿಷತ್ತು ರಚಿಸಿದ ಯಾವುದೇ ವಿನಿಯಮವನ್ನು ರದ್ದುಗೊಳಿಸಲು ಅಧಿಕಾರ ಹೊಂದಿರತಕ್ಕದ್ದು ಮತ್ತು ಅಂಥ ವಿನಿಯಮಗಳು ಅಂಥ ನಿರ್ಣಯದ ದಿನಾಂಕದಿಂದ ಜಾರಿಗೆ ಬರುವಂತೆ ಪರಿಣಾಮಕಾರಿಯಾಗಿರುವುದು ನಿಂತುಹೋಗತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**14. ವಿದ್ಯಾಲಯದ ಪುನರವಲೋಕನ ಆಯೋಗದ ನೇಮಕಾತಿ.–** (1) [1][ಕುಲಾಧಿಪತಿ][1]ಯು ವಿದ್ಯಾಲಯದ ಕೆಲಸದ ರೀತಿ ನೀತಿಗಳನ್ನು ಪುನರವಲೋಕಿಸಲು ಮತ್ತು ಶಿಫಾರಸುಗಳನ್ನು ಮಾಡಲು ಕನಿಷ್ಠ ಪ್ರತಿ ಐದು ವರ್ಷಗಳಿಗೊಮ್ಮೆ ಒಂದು ಆಯೋಗವನ್ನು ರಚಿಸತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಆಯೋಗವು ಮೂವರಿಗೆ ಕಡಿಮೆ ಇರದಂತೆ ಶ್ರೇಷ್ಠ ಶಿಕ್ಷಣ ತಜ್ಞರನ್ನು ಒಳಗೊಂಡಿರತಕ್ಕದ್ದು. ಅವರ ಪೈಕಿ, ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿ [1][ಕುಲಾಧಿಪತಿ][1]ಯು ನೇಮಿಸಿದ ಒಬ್ಬ ವ್ಯಕ್ತಿಯು ಅಂಥ ಆಯೋಗದ ಅಧ್ಯಕ್ಷನಾಗಿರತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಸದಸ್ಯರ ನೇಮಕಾತಿಯ ನಿಬಂಧನೆಗಳು ಮತ್ತು ಷರತ್ತುಗಳು [1][ಕುಲಾಧಿಪತಿ][1]ಯು ನಿರ್ಧರಿಸ ಬಹುದಾದಂಥವುಗಳಾಗಿರತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(4) ಆಯೋಗವು ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ನಂತರ [1][ಕುಲಾಧಿಪತಿ][1]ಗೆ ತನ್ನ ಶಿಫಾರಸುಗಳನ್ನು ಮಾಡತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(5) ಶಿಫಾರಸುಗಳ ಮೇಲೆ [1][ಕುಲಾಧಿಪತಿ][1]ಯು ತಾನು ಸೂಕ್ತವೆಂದು ಭಾವಿಸುವಂಥ ಕ್ರಮವನ್ನು ಕೈಗೊಳ್ಳತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**15. ರಚನೆ, ಖಾಲಿ ಸ್ಥಾನಗಳು, ಮೊದಲಾದವುಗಳಲ್ಲಿ ದೋಷವಿರುವ ಕಾರಣ ಮಾತ್ರದಿಂದಲೇ ಕ್ರಮವು ಅಸಿಂಧುವಾಗದಿರುವುದು.–** (1) ಸಾಮಾನ್ಯ ಪರಿಷತ್ತು, ಕಾರ್ಯನಿರ್ವಾಹಕ ಪರಿಷತ್ತು, ಶೈಕ್ಷಣಿಕ ಪರಿಷತ್ತು ಅಥವಾ ವಿದ್ಯಾಲಯದ ಯಾವುದೇ ಇತರ ಪ್ರಾಧಿಕಾರವು ಅಥವಾ ನಿಕಾಯವು ವಿಧ್ಯುಕ್ತವಾಗಿ ರಚಿತವಾಗದಿದ್ದರೂ ಅಥವಾ ಅದರ ರಚನೆ ಅಥವಾ ಪುನಾರಚನೆಯಲ್ಲಿ ಯಾವುದೇ ಸಮಯದಲ್ಲಿ ದೋಷವಿದ್ದರೂ ಮತ್ತು ಯಾವುದೇ ಅಂಥ ಪ್ರಾಧಿಕಾರ ಅಥವಾ ನಿಕಾಯದ ಸದಸ್ಯತ್ವದಲ್ಲಿ ಖಾಲಿಸ್ಥಾನವಿದ್ದರೂ, ಅಂಥ ಯಾವುದೇ ಕಾರಣ ಅಥವಾ ಕಾರಣಗಳ ಮೇಲೆ ಅಂಥ ಪ್ರಾಧಿಕಾರ ಅಥವಾ ನಿಕಾಯದ ಯಾವುದೇ ಅಧಿನಿಯಮ ಅಥವಾ ನಿಯಮ ಅಥವಾ ವ್ಯವಹರಣೆಗಳು ಅಸಿಂಧುವಾಗತಕ್ಕದ್ದಲ್ಲ.

(2) ವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಯಾವುದೇ ನಿರ್ಣಯವನ್ನು ಯಾರೇ ಸದಸ್ಯನಿಗೆ ನೋಟೀಸು ಜಾರಿ ಮಾಡುವಲ್ಲಿ ಉಂಟಾದ ಯಾವುದೇ ಕ್ರಮದ ಕಾರಣದಿಂದ ಅಸಿಂಧುವಾಗಿದೆಯೆಂದು ಭಾವಿಸತಕ್ಕದ್ದಲ್ಲ. ಆದರೆ, ಅಂಥ ಪ್ರಾಧಿಕಾರದ ಅಥವಾ ನಿಕಾಯದ ನಡವಳಿಗಳು ಅಂಥ ಕ್ರಮದಿಂದ ಪ್ರತಿಕೂಲ ಪರಿಣಾಮ ಹೊಂದತಕ್ಕದ್ದಲ್ಲ.

**16. ಪ್ರಾರಂಭಿಕ ತೊಂದರೆಗಳ ನಿವಾರಣೆ.–** ವಿದ್ಯಾಲಯದ ಸ್ಥಾಪನೆಯ ಸಂಬಂಧದಲ್ಲಿ ಅಥವಾ ವಿದ್ಯಾಲಯದ ಯಾವುದೇ ಪ್ರಾಧಿಕಾರದ ಮೊದಲ ಸಭೆಯ ಸಂಬಂಧದಲ್ಲಿ ಅಥವಾ ಅನ್ಯಥಾ ಈ ಅಧಿನಿಯಮದ ಮತ್ತು ವಿನಿಯಮಗಳ ಉಪಬಂಧಗಳನ್ನು ಮೊದಲು ಜಾರಿಗೊಳಿಸುವ ಸಂಬಂಧದಲ್ಲಿ ಯಾವುವೇ ತೊಂದರೆಗಳು ಉದ್ಭವಿಸಿದರೆ, ಕುಲಾಧಿಪತಿಯು ಯಾವುದೇ ಸಮಯದಲ್ಲಿ, ವಿದ್ಯಾಲಯದ ಎಲ್ಲ ಪ್ರಾಧಿಕಾರಗಳು ರಚಿತವಾಗುವ ಮೊದಲು, ಆದೇಶದ ಮೂಲಕ, ತೊಂದರೆಯನ್ನು ನಿವಾರಿಸುವ ಉದ್ದೇಶಕ್ಕಾಗಿ ಅಗತ್ಯವೆಂದು ಅಥವಾ ವಿಹಿತವೆಂದು ಅವನಿಗೆ ಕಂಡುಬರುವಂಥ, ಈ ಅಧಿನಿಯಮದ ಮತ್ತು ವಿನಿಯಮಗಳ ಉಪಬಂಧಗಳೊಂದಿಗೆ ಸಾಧ್ಯವಾಗಬಹುದಾದಷ್ಟು ಮಟ್ಟಿಗೆ ಸುಸಂಗತವಾದ ಯಾವುದೇ ನೇಮಕಾತಿಯನ್ನು ಅಥವಾ ಯಾವುದೇ ಕಾರ್ಯವನ್ನು ಮಾಡಬಹುದು ಮತ್ತು ಅಂಥ ಪ್ರತಿಯೊಂದು ಆದೇಶವು ಈ ಅಧಿನಿಯಮದಲ್ಲಿ ಮತ್ತು ವಿನಿಯಮಗಳಲ್ಲಿ ಉಪಬಂಧಿಸಿದ ರೀತಿಯಲ್ಲಿ ಅಂಥ ನೇಮಕಾತಿಯನ್ನು ಅಥವಾ ಕ್ರಮವನ್ನು ಮಾಡಲಾಗಿದ್ದರೆ ಅಥವಾ ಕೈಗೊಳ್ಳಲಾಗಿದ್ದರೆ ಹೇಗೋ ಹಾಗೆ ಪರಿಣಾಮವನ್ನು ಹೊಂದಿರತಕ್ಕದ್ದು:

ಪರಂತು, ಅಂಥ ಯಾವುದೇ ಆದೇಶವನ್ನು ಮಾಡುವ ಮೊದಲು [1][ಕುಲಾಧಿಪತಿ][1]ಯು [1][ಕುಲಪತಿ][1]ಯ ಮತ್ತು ರಚಿಸಿರಬಹುದಾದಂಥ ವಿದ್ಯಾಲಯದ ಸಮುಚಿತ ಪ್ರಾಧಿಕಾರದ ಅಭಿಪ್ರಾಯವನ್ನು ತಿಳಿದುಕೊಳ್ಳತಕ್ಕದ್ದು ಮತ್ತು ಅದನ್ನು ಪರಿಗಣಿಸತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**17. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮದಲ್ಲಿ ಮತ್ತು ವಿನಿಯಮಗಳಲ್ಲಿ ಏನೇ ಇದ್ದರೂ, [1][ಕುಲಪತಿ][1]ಯು [1][ಕುಲಾಧಿಪತಿ][1]ಯ ಪೂರ್ವಾನುಮೋದನೆಯನ್ನು ಪಡೆದುಕೊಂಡು ಮತ್ತು ನಿಧಿಯ ಲಭ್ಯತೆಗೆ ಒಳಪಟ್ಟು, ಈ ಅಧಿನಿಯಮದ ಮತ್ತು ವಿನಿಯಮಗಳ ಉಪಬಂಧಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ ವಿದ್ಯಾಲಯದ ಎಲ್ಲ ಅಥವಾ ಯಾವುವೇ ಪ್ರಕಾರ್ಯಗಳನ್ನು ನಿರ್ವಹಿಸಬಹುದು ಮತ್ತು ಆ ಉದ್ದೇಶಕ್ಕಾಗಿ ಈ ಅಧಿನಿಯಮದ ಮತ್ತು ವಿನಿಯಮಗಳ ಮೂಲಕ ಉಪಬಂಧಿಸಲಾದಂಥ ಪ್ರಾಧಿಕಾರವು ಅಸ್ತಿತ್ವಕ್ಕೆ ಬರುವವರೆಗೆ ವಿದ್ಯಾಲಯದ ಯಾವುದೇ ಪ್ರಾಧಿಕಾರವು ಈ ಅಧಿನಿಯಮದ ಮತ್ತು ವಿನಿಯಮಗಳ ಮೂಲಕ ಚಲಾಯಿಸಬೇಕಾದ ಅಥವಾ ನಿರ್ವಹಿಸಬೇಕಾದ ಯಾವುವೇ ಅಧಿಕಾರಗಳನ್ನು ಚಲಾಯಿಸಬಹುದು ಅಥವಾ ಯಾವುವೇ ಕರ್ತವ್ಯಗಳನ್ನು ನಿರ್ವಹಿಸಬಹುದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**18. ವಿದ್ಯಾಲಯದ ಪ್ರಾಧಿಕಾರಗಳು ಮತ್ತು ಅಧಿಕಾರಗಳು.–** ವಿದ್ಯಾಲಯದ ಪ್ರಾಧಿಕಾರಗಳು ಮತ್ತು ಅವುಗಳ ರಚನೆ, ಅಧಿಕಾರಗಳು, ಪ್ರಕಾರ್ಯಗಳು ಮತ್ತು ಅವುಗಳಿಗೆ ಸಂಬಂಧಿಸಿದ ಇತರ ವಿಷಯಗಳು, ವಿದ್ಯಾಲಯದ ಅಧಿಕಾರಿಗಳು ಮತ್ತು ಅವರ ನೇಮಕಾತಿ, ಅಧಿಕಾರಗಳು, ಪ್ರಕಾರ್ಯಗಳು ಮತ್ತು ಅವರಿಗೆ ಸಂಬಂಧಿಸಿದ ಇತರ ವಿಷಯಗಳು ಮತ್ತು ವಿದ್ಯಾಲಯದ ಹಣಕಾಸು, ಅಧಿಕಾರಗಳು, ಬೋಧನೆ, ಆಡಳಿತ ಮತ್ತು ವ್ಯವಸ್ಥಾಪನೆಗೆ ಸಂಬಂಧಿಸಿದ ಎಲ್ಲ ಇತರ ವಿಷಯಗಳು ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿರುವಂತೆ ಅಥವಾ ವಿನಿಯಮಗಳ ಮೂಲಕ ಉಪಬಂಧಿಸಬಹುದಾದಂತೆ ಇರತಕ್ಕದ್ದು.

**19. ನಷ್ಟ ಭರ್ತಿ.–** ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ವಿನಿಯಮಗಳ ಅನುಸರಣೆಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲಾಗಿದೆಯೆಂದು ತಾತ್ಪರ್ಯವಾಗುವ ಯಾವುದೇ ಕಾರ್ಯದ ಸಂಬಂಧದಲ್ಲಿ ವಿದ್ಯಾಲಯದ [1][ಕುಲಪತಿ][1] ಯ, ವಿದ್ಯಾಲಯದ ಪ್ರಾಧಿಕಾರಗಳ ಅಥವಾ ಅಧಿಕಾರಿಗಳ ಅಥವಾ ಇತರ ಯಾರೇ ವ್ಯಕ್ತಿಯ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡತಕ್ಕದ್ದಲ್ಲ ಮತ್ತು ಅವುಗಳಿಂದ / ಅವರಿಂದ ಯಾವುದೇ ನಷ್ಟ ಪರಿಹಾರವನ್ನು ಕ್ಲೇಮು ಮಾಡತಕ್ಕದ್ದಲ್ಲ.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**20. ಅನುಸೂಚಿಯನ್ನು ತಿದ್ದುಪಡಿ ಮಾಡಲು ಅಧಿಕಾರ.–** (1) ಸಾಮಾನ್ಯ ಪರಿಷತ್ತು, [1][ಕುಲಾಧಿಪತಿ][1] ಯ ಮತ್ತು ರಾಜ್ಯ ಸರ್ಕಾರದ ಅನುಮೋದನೆಯನ್ನು ಪಡೆದುಕೊಂಡ ಮೊದಲೇ ಅಧಿಸೂಚನೆಯ ಮೂಲಕ ಅನುಸೂಚಿಯನ್ನು ಉತ್ತರಾನ್ವಯವಾಗಿ ಅಥವಾ ಪೂರ್ವಾನ್ವಯವಾಗಿ ತಿದ್ದುಪಡಿ ಮಾಡಬಹುದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) (1)ನೇ ಉಪಪ್ರಕರಣದ ಮೇರೆಗೆ ಮಾಡಲಾದ ಪ್ರತಿಯೊಂದು ಅಧಿಸೂಚನೆಯ ಒಂದು ಪ್ರತಿಯನ್ನು, ಅದನ್ನು ಮಾಡಿದ ತರುವಾಯ ಸಾಧ್ಯವಾದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸತಕ್ಕದ್ದು.

**21. ಅಧಿನಿಯಮವು ಅಧ್ಯಾರೋಹಿ ಪರಿಣಾಮವನ್ನು ಹೊಂದಿರುವುದು.–** ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಲಾದ ಯಾವುವೇ ವಿನಿಯಮಗಳ ಉಪಬಂಧಗಳು, ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಅಥವಾ ಈ ಅಧಿನಿಯಮವನ್ನು ಹೊರತುಪಡಿಸಿ ಯಾವುದೇ ಕಾನೂನಿನಿಂದಾಗಿ ಪರಿಣಾಮ ಹೊಂದಿರುವ ಯಾವುದೇ ಲಿಖಿತದಲ್ಲಿ ಏನೇ ಒಳಗೊಂಡಿದ್ದರೂ, ಪರಿಣಾಮವನ್ನು ಹೊಂದಿರತಕ್ಕದ್ದು.

**22. ನಿರಸನ ಮತ್ತು ಉಳಿಸುವಿಕೆ.–** (1) ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ಅಧ್ಯಾದೇಶ, 1986ನ್ನು (1986ರ ಕರ್ನಾಟಕ ಅಧ್ಯಾದೇಶ 1) ಈ ಮೂಲಕ ನಿರಸಗೊಳಿಸಲಾಗಿದೆ ಮತ್ತು ಇದನ್ನು ಎಂದೂ ಹೊರಡಿಸಲಾಗಿರಲಿಲ್ಲ ಎಂಬುದಾಗಿ ಭಾವಿಸತಕ್ಕದ್ದು.

(2) ಅಂಥ ನಿರಸನವಿದ್ದಾಗ್ಯೂ, ಸದರಿ ಅಧ್ಯಾದೇಶದ ಮೇರೆಗೆ ಮಾಡಲಾದ ಯಾವುದೇ ಕಾರ್ಯವನ್ನು ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಮೇರೆಗೆ ಮಾಡಲಾಗಿದೆಯೆಂದು ಅಥವಾ ಕೈಗೊಳ್ಳಲಾಗಿದೆಯೆಂದು ಭಾವಿಸತಕ್ಕದ್ದು.

## ಅನುಸೂಚಿ

### (18ನೇ ಪ್ರಕರಣವನ್ನು ನೋಡಿ)

**1. ಪರಿಭಾಷೆಗಳು.–** ಈ ಅನುಸೂಚಿಯಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(1) "ಖಂಡ" ಎಂದರೆ ಈ ಅನುಸೂಚಿಯ ಒಂದು ಖಂಡ;

(2) "ಬೋಧಕ" ಎಂಬುದು ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು, ರೀಡರುಗಳು, ಉಪನ್ಯಾಸಕರು ಮತ್ತು ವಿದ್ಯಾಲಯದಲ್ಲಿ ಶಿಕ್ಷಣವನ್ನು ನೀಡುವ ಯಾರೇ ಇತರ ವ್ಯಕ್ತಿಯನ್ನು ಒಳಗೊಳ್ಳುತ್ತದೆ.

**2. ಸಾಮಾನ್ಯ ಪರಿಷತ್ತಿನ ಸದಸ್ಯತ್ವ.–** (1) ವಿದ್ಯಾಲಯದ ಸಾಮಾನ್ಯ ಪರಿಷತ್ತು ಇರತಕ್ಕದ್ದು. ಅದು ಈ ಮುಂದಿನ ಸದಸ್ಯರುಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಭಾರತದ ಬಾರ್ ಕೌನ್ಸಿಲಿನ ಅಧ್ಯಕ್ಷ;

(ಬಿ) [1][ಕುಲಪತಿ][1];

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಸಿ) ಭಾರತದ ಬಾರ್ ಕೌನ್ಸಿಲ್ ಟ್ರಸ್ಟಿನ ಇಬ್ಬರು ನಾಮ ನಿರ್ದೇಶಿತರು, ಅವರಲ್ಲಿ ಒಬ್ಬರು ವ್ಯವಸ್ಥಾಪಕ ಟ್ರಸ್ಟಿಯಾಗಿರತಕ್ಕದ್ದು;

(ಡಿ) ಭಾರತದ ಬಾರ್ ಕೌನ್ಸಿಲ್‌ನ ಸದಸ್ಯರಿಂದ ಆರು ನಾಮನಿರ್ದೇಶಿತರು;

(ಇ) [1][ಕುಲಾಧಿಪತಿ][1]ಯೊಂದಿಗೆ ಸಮಾಲೋಚಿಸಿ ಭಾರತದ ಬಾರ್ ಕೌನ್ಸಿಲಿನಿಂದ ನಾಮನಿರ್ದೇಶಿತರಾದ ಇಬ್ಬರು ವ್ಯಕ್ತಿಗಳು;

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಎಫ್) ಭಾರತದ ಬಾರ್ ಕೌನ್ಸಿಲ್ ಟ್ರಸ್ಟ್‌ನಿಂದ ನಾಮನಿರ್ದೇಶಿತರಾದ, ಸಾಮಾಜಿಕ ವಿಜ್ಞಾನ ಮತ್ತು ಮಾನವಿಕ ವಿಷಯಗಳಿಗೆ ಸಂಬಂಧಪಟ್ಟ ಶಿಕ್ಷಣ ವಿಭಾಗಗಳ ಇಬ್ಬರು ಪ್ರತಿನಿಧಿಗಳು;

(ಜಿ) [1][ಕುಲಾಧಿಪತಿ][1]ಯೊಂದಿಗೆ ಸಮಾಲೋಚಿಸಿ ಭಾರತದ ಬಾರ್ ಕೌನ್ಸಿಲಿನಿಂದ ನಾಮನಿರ್ದೇಶಿತರಾದ, ಸರ್ವೋಚ್ಚ ನ್ಯಾಯಾಲಯದ ಮತ್ತು ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ಪೈಕಿ ಇಬ್ಬರು ನ್ಯಾಯಾಧೀಶರು;

(ಹೆಚ್) [1][ಕುಲಾಧಿಪತಿ][1] ಯೊಂದಿಗೆ ಸಮಾಲೋಚಿಸಿ, ಕಾನೂನು ಮತ್ತು ಶಿಕ್ಷಣ ಆಡಳಿತಕ್ಕೆ ಸಂಬಂಧಿಸಿದ ವ್ಯಕ್ತಿಗಳ ಪೈಕಿ ಭಾರತದ ಬಾರ್ ಕೌನ್ಸಿಲ್ ಟ್ರಸ್ಟ್ ನಾಮನಿರ್ದೇಶಿಸಿದ ಐವರು ವ್ಯಕ್ತಿಗಳು;

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಐ) ಕರ್ನಾಟಕ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು;

(ಜೆ) ಕರ್ನಾಟಕ ಸರ್ಕಾರದಿಂದ ನಾಮನಿರ್ದೇಶಿತರಾದ ಐವರು ಸದಸ್ಯರು, ಅವರ ಪೈಕಿ ಒಬ್ಬರು ಕರ್ನಾಟಕ ಸರ್ಕಾರದ ಕಾನೂನು ಸಚಿವರು, ಒಬ್ಬರು ಕರ್ನಾಟಕದ ಮಹಾ ನ್ಯಾಯವಾದಿಗಳು, ಒಬ್ಬರು ಕರ್ನಾಟಕ ಸರ್ಕಾರದ ಶಿಕ್ಷಣ ಸಚಿವರು, ಒಬ್ಬರು ಕರ್ನಾಟಕ ಸರ್ಕಾರದ ಶಿಕ್ಷಣ ಇಲಾಖೆಯ ಕಾರ್ಯದರ್ಶಿಗಳು, ಮತ್ತು ಇನ್ನೊಬ್ಬರು ಕಾನೂನು ಕ್ಷೇತ್ರದಲ್ಲಿ ಸುಪ್ರಸಿದ್ಧ ವ್ಯಕ್ತಿ ಇರತಕ್ಕದ್ದು;

(ಕೆ) ವಿದ್ಯಾಲಯದ ಎಲ್ಲ ವಿಭಾಗಗಳ ಮುಖ್ಯಸ್ಥರುಗಳು, ಯಾರಾದರೂ ಇದ್ದರೆ;

(ಎಲ್) ಸಂಘದಿಂದ ನಾಮನಿರ್ದೇಶಿತರಾದ ಐವರು ಸದಸ್ಯರು, ಅವರ ಪೈಕಿ ಒಬ್ಬ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲಿನ ಅಧ್ಯಕ್ಷ, ಒಬ್ಬ ಕರ್ನಾಟಕ ಸರ್ಕಾರದ ಕಾನೂನು ಇಲಾಖೆಯ ಕಾರ್ಯದರ್ಶಿ ಮತ್ತು ಇತರರು ಅದರ ಸದಸ್ಯರುಗಳ ಪೈಕಿಯಿಂದ ಆಗಿರತಕ್ಕದ್ದು;

(ಎಮ್) ಸಾಮಾನ್ಯ ಪರಿಷತ್ತಿನ ಸದಸ್ಯರಾಗಿರದ ಕಾರ್ಯನಿರ್ವಾಹಕ ಪರಿಷತ್ತಿನ ಅಂಥ ಇತರ ಸದಸ್ಯರು:

ಪರಂತು, ವಿದ್ಯಾಲಯದ ಒಬ್ಬ ನೌಕರನು (ಇ) ಮತ್ತು (ಎಫ್) ಬಾಬುಗಳ ಅಡಿಯಲ್ಲಿ ನಾಮನಿರ್ದೇಶನಕ್ಕೆ ಅರ್ಹನಾಗಿರುವುದಿಲ್ಲ:

ಮತ್ತೂ ಪರಂತು, ಸಂಘದ ನಿಯಮಗಳ ಅಡಿಯಲ್ಲಿ ರಚಿತವಾದ ಸಾಮಾನ್ಯ ಪರಿಷತ್ತು ಮೊದಲ ಸಾಮಾನ್ಯ ಪರಿಷತ್ತು ಆಗಿರತಕ್ಕದ್ದು.

**3. ಅಧ್ಯಕ್ಷ, ಕಾರ್ಯದರ್ಶಿ ಮತ್ತು ಖಜಾಂಚಿ.–** (1) ಭಾರತದ ಬಾರ್ ಕೌನ್ಸಿಲ್‌ನ ಅಧ್ಯಕ್ಷ ಸಾಮಾನ್ಯ ಪರಿಷತ್ತಿನ ಅಧ್ಯಕ್ಷನಾಗಿರತಕ್ಕದ್ದು.

(2) ವಿದ್ಯಾಲಯದ [1][ಕುಲಪತಿ][1]ಯು ಸಾಮಾನ್ಯ ಪರಿಷತ್ತಿನ ಕಾರ್ಯದರ್ಶಿಯಾಗಿರತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಭಾರತದ ಬಾರ್ ಕೌನ್ಸಿಲ್ ಟ್ರಸ್ಟಿನ ವ್ಯವಸ್ಥಾಪಕ ಟ್ರಸ್ಟಿಯು ವಿದ್ಯಾಲಯದ ಖಜಾಂಚಿಯಾಗಿರತಕ್ಕದ್ದು.

**4. ಸಾಮಾನ್ಯ ಪರಿಷತ್ತಿನ ಸದಸ್ಯರ ಪದಾವಧಿ.–** (1) ಸಾಮಾನ್ಯ ಪರಿಷತ್ತಿನ ಸದಸ್ಯರ ಪದಾವಧಿಯು (2) ಮತ್ತು (3)ನೇ ಉಪಖಂಡಗಳಿಗೆ ಒಳಪಟ್ಟು, ಮೂರು ವರ್ಷಗಳಾಗಿರತಕ್ಕದ್ದು:

ಪರಂತು, ಮೊದಲ ಸಾಮಾನ್ಯ ಪರಿಷತ್ತಿನ ಅವಧಿಯು, ಈ ಅನುಸೂಚಿಯಲ್ಲಿನ ಉಪಬಂಧಗಳ ಮೇರೆಗೆ ನಿಯತ ಸಾಮಾನ್ಯ ಪರಿಷತ್ತಿನ ರಚನೆಯಾದ ಮೇಲೆ ಮುಗಿಯುತ್ತದೆ.

(2) ಸಾಮಾನ್ಯ ಪರಿಷತ್ತಿನ ಒಬ್ಬ ಸದಸ್ಯನು ಪದದ ಅಥವಾ ಅವನು ಧಾರಣಮಾಡಿದ ಹುದ್ದೆಯ ಕಾರಣದಿಂದಾಗಿ ಅಂಥ ಸದಸ್ಯನಾಗಿದ್ದಲ್ಲಿ ಅಥವಾ ಅವನು ನಾಮನಿರ್ದೇಶಿತ ಸದಸ್ಯನಾಗಿರುವಲ್ಲಿ, ಅವನು ಅಂಥ ಪದವನ್ನು ಅಥವಾ ಹುದ್ದೆಯನ್ನು ಧಾರಣಮಾಡಿರುವುದು ನಿಂತುಹೋದಾಗ, ಸಂದರ್ಭಾನುಸಾರ ಅವನ ನಾಮನಿರ್ದೇಶನವನ್ನು ಹಿಂತೆಗೆದುಕೊಂಡಾಗ ಅಥವಾ ರದ್ದುಮಾಡಿದಾಗ ಅವನ ಸದಸ್ಯತ್ವವು ಕೊನೆಗೊಳ್ಳತಕ್ಕದ್ದು.

(3) ಸಾಮಾನ್ಯ ಪರಿಷತ್ತಿನ ಒಬ್ಬ ಸದಸ್ಯನು ರಾಜೀನಾಮೆ ನೀಡಿದರೆ ಅಥವಾ ಮಾನಸಿಕವಾಗಿ ಅಸ್ವಸ್ಥನಾದರೆ ಅಥವಾ ದಿವಾಳಿಯಾದರೆ ಅಥವಾ ನೈತಿಕ ಅಧಃಪತನವನ್ನು ಒಳಗೊಂಡ ಕ್ರಿಮಿನಲ್ ಅಪರಾಧದ ದೋಷಿಯೆಂದು ನಿರ್ಣೀತನಾದರೆ ಅಥವಾ [1][ಕುಲಪತಿ][1]ಯ ಹೊರತಾಗಿ ಒಬ್ಬ ಸದಸ್ಯನು ಆ ವಿದ್ಯಾಲಯದಲ್ಲಿ ಪೂರ್ಣಕಾಲಿಕ ನೇಮಕಾತಿಯನ್ನು ಅಂಗೀಕರಿಸಿದ್ದರೆ ಅಥವಾ ಅವನು ಅಧ್ಯಕ್ಷರ ಅನುಮತಿಯಿಲ್ಲದೆ ಸಾಮಾನ್ಯ ಪರಿಷತ್ತಿನ ಮೂರು ನಿರಂತರ ಸಭೆಗಳಿಗೆ ಹಾಜರಾಗಲು ತಪ್ಪಿದರೆ, ಅವನು ಸದಸ್ಯನಾಗಿರುವುದು ನಿಂತು ಹೋಗತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(4) ಸಾಮಾನ್ಯ ಪರಿಷತ್ತಿನ ಒಬ್ಬ ಸದಸ್ಯನು ಅಧ್ಯಕ್ಷನಿಗೆ ಪತ್ರ ಬರೆಯುವ ಮೂಲಕ ತನ್ನ ಪದಕ್ಕೆ ರಾಜೀನಾಮೆಯನ್ನು ನೀಡಬಹುದು ಮತ್ತು ಅಧ್ಯಕ್ಷನು ಅಂಥ ರಾಜೀನಾಮೆಯನ್ನು ಅಂಗೀಕರಿಸಿದ ಕೂಡಲೇ ಅದು ಜಾರಿಗೆ ಬರತಕ್ಕದ್ದು.

(5) ಸಾಮಾನ್ಯ ಪರಿಷತ್ತಿನಲ್ಲಿ ಉಂಟಾದ ಯಾವುದೇ ಖಾಲಿ ಸ್ಥಾನವನ್ನು ನೇಮಕಾತಿಯ ಮೂಲಕವಾಗಲೀ ಅಥವಾ ಸಂದರ್ಭಾನುಸಾರ ಒಬ್ಬ ವ್ಯಕ್ತಿಯ ನಾಮನಿರ್ದೇಶನದ ಮೂಲಕವಾಗಲೀ ಭರ್ತಿ ಮಾಡಲು ಹಕ್ಕುಳ್ಳ ಸಂಬಂಧಪಟ್ಟ ಪ್ರಾಧಿಕಾರವು ಭರ್ತಿಮಾಡಬಹುದು ಮತ್ತು ಹಾಗೆ ನೇಮಕಗೊಂಡ ಅಥವಾ ನಾಮನಿರ್ದೇಶಿತನಾದ ವ್ಯಕ್ತಿಯು, ಅವನು ಯಾರ ಸ್ಥಾನದಲ್ಲಿ ನೇಮಕಗೊಂಡಿರುವನೋ ಅಥವಾ ನಾಮನಿರ್ದೇಶಿತನಾಗಿರುವನೋ ಆ ಸ್ಥಾನದಲ್ಲಿ ಅವನು ಆ ಖಾಲಿ ಸ್ಥಾನವು ಉಂಟಾಗದಿದ್ದರೆ ಎಲ್ಲಿಯವರೆಗೆ ಪದವನ್ನು ಹೊಂದಿರುತ್ತಿದ್ದನೋ ಅಲ್ಲಿಯವರೆಗೆ ಮಾತ್ರ ಆ ಪದವನ್ನು ಹೊಂದಿರತಕ್ಕದ್ದು.

[1]**[5. ಸಾಮಾನ್ಯ ಪರಿಷತ್ತಿನ ಅಧಿಕಾರಗಳು.– ಸಾಮಾನ್ಯ ಪರಿಷತ್ತು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–**

(1) ವಿದ್ಯಾಲಯದ ಪ್ರಮುಖ ಕಾರ್ಯನೀತಿಗಳು ಮತ್ತು ಕಾರ್ಯಕ್ರಮಗಳನ್ನು ಕಾಲಕಾಲಕ್ಕೆ ಪುನರವಲೋಕಿಸುವುದು ಮತ್ತು ವಿದ್ಯಾಲಯದ ಸುಧಾರಣೆ ಮತ್ತು ಅಭಿವೃದ್ಧಿಗಾಗಿ ಕ್ರಮಗಳನ್ನು ಸೂಚಿಸುವುದು.

(2) ವಾರ್ಷಿಕ ವರದಿ, ಹಣಕಾಸು ಅಂದಾಜುಗಳು ಮತ್ತು ಅಂಥ ಲೆಕ್ಕಪತ್ರಗಳ ಮೇಲಿನ ಲೆಕ್ಕಪರಿಶೋಧನಾ ವರದಿಗಳ ಮೇಲೆ ನಿರ್ಣಯಗಳನ್ನು ಪರಿಗಣಿಸುವುದು ಮತ್ತು ಅದಕ್ಕೆ ಅನುಮೋದನೆ ನೀಡುವುದು.

(3) ವಿದ್ಯಾಲಯದ ಕಾರ್ಯಗಳನ್ನು ಮತ್ತು ಆಡಳಿತವನ್ನು ಸಮರ್ಥವಾಗಿ ನಡೆಸಲು ಅಗತ್ಯವೆಂದು ಅದು ಭಾವಿಸಬಹುದಾದಂಥ ಇತರ ಪ್ರಕಾರ್ಯಗಳನ್ನು ನಿರ್ವಹಿಸುವುದು][1].

1. 1993ರ ಅಧಿನಿಯಮ ಸಂಖ್ಯೆ 3ರ ಮೂಲಕ 14.5.1992 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**6. ಸಾಮಾನ್ಯ ಪರಿಷತ್ತಿನ ಸಭೆಗಳು.–** (1) ಸಾಮಾನ್ಯ ಪರಿಷತ್ತು ವರ್ಷಕ್ಕೆ ಕನಿಷ್ಠ ಒಂದು ಸಲ ಸಭೆ ಸೇರತಕ್ಕದ್ದು. ಸಾಮಾನ್ಯ ಪರಿಷತ್ತಿನ ವಾರ್ಷಿಕ ಸಭೆಯು, ಯಾವುದೇ ವರ್ಷಕ್ಕೆ ಸಂಬಂಧಿಸಿದಂತೆ ಸಾಮಾನ್ಯ ಪರಿಷತ್ತು ಇನ್ನಾವುದೇ ದಿನಾಂಕವನ್ನು ನಿಗದಿಪಡಿಸಿದ್ದ ಹೊರತು, ಕಾರ್ಯನಿರ್ವಾಹಕ ಪರಿಷತ್ತು ನಿಗದಿಪಡಿಸುವ ದಿನಾಂಕದಂದು ನಡೆಯತಕ್ಕದ್ದು.

(2) ಅಧ್ಯಕ್ಷನು ಸಭೆಗಳ ಅಧ್ಯಕ್ಷತೆ ವಹಿಸತಕ್ಕದ್ದು. ಅಧ್ಯಕ್ಷನ ಗೈರುಹಾಜರಿಯಲ್ಲಿ ಭಾರತದ ಬಾರ್ ಕೌನ್ಸಿಲ್ ಟ್ರಸ್ಟಿನ ವ್ಯವಸ್ಥಾಪಕ ಟ್ರಸ್ಟಿಯು ಮತ್ತು ಅವರಿಬ್ಬರ ಗೈರುಹಾಜರಿಯಲ್ಲಿ [1][ಕುಲಪತಿ][1] ಯು ಅಧ್ಯಕ್ಷತೆ ವಹಿಸತಕ್ಕದ್ದು:

ಪರಂತು, [1][ಕುಲಾಧಿಪತಿ][1]ಯು ಸಾಮಾನ್ಯ ಪರಿಷತ್ತಿನ ಸಭೆಗಳಿಗೆ ಹಾಜರಾಗಬಹುದು ಮತ್ತು ಆತನು ಹಾಗೆ ಸಭೆಗೆ ಹಾಜರಾದರೆ ಅಂಥ ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಹಿಂದಿನ ವರ್ಷದ ಅವಧಿಯಲ್ಲಿ ವಿದ್ಯಾಲಯದ ಕೆಲಸಕಾರ್ಯಗಳ ಬಗೆಗಿನ ವರದಿಯನ್ನು, ಜಮೆ ಮತ್ತು ವೆಚ್ಚಗಳ ವಿವರಪಟ್ಟಿಯನ್ನು, ಲೆಕ್ಕ ಪರಿಶೋಧನೆ ಮಾಡಿರುವಂತೆ ಆಯವ್ಯಯ ಪಟ್ಟಿಯನ್ನೂ ಮತ್ತು ಹಣಕಾಸಿನ ಅಂದಾಜನ್ನು ಸಾಮಾನ್ಯ ಪರಿಷತ್ತಿನ ವಾರ್ಷಿಕ ಸಭೆಯಲ್ಲಿ [1][ಕುಲಪತಿ][1]ಯು ಮಂಡಿಸತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(4) ಸಾಮಾನ್ಯ ಪರಿಷತ್ತಿನ ಸಭೆಗಳನ್ನು ಅಧ್ಯಕ್ಷನು ಅಥವಾ ಆತನ ಗೈರುಹಾಜರಿಯಲ್ಲಿ [1][ಕುಲಪತಿಯು][1] ತಾನೇ ಸ್ವತಃ ನಿರ್ಧಾರದ ಮೇರೆಗೆ ಅಥವಾ ಸಾಮಾನ್ಯ ಪರಿಷತ್ತಿನ ಹತ್ತಕ್ಕಿಂತ ಕಡಿಮೆ ಇಲ್ಲದಷ್ಟು ಸದಸ್ಯರ ಮನವಿಯ ಮೇರೆಗೆ ಕರೆಯತಕ್ಕದ್ದು.

(5) ಸಾಮಾನ್ಯ ಪರಿಷತ್ತಿನ ಪ್ರತಿಯೊಂದು ಸಭೆಗೆ 15 ದಿನಗಳ ಮುಂಚಿತವಾಗಿ ನೋಟೀಸನ್ನು ನೀಡತಕ್ಕದ್ದು.

(6) ಸಾಮಾನ್ಯ ಪರಿಷತ್ತಿನ ಮೂರನೇ ಒಂದು ಭಾಗದ ಸದಸ್ಯರು ಕೋರಂ ಆಗತಕ್ಕದ್ದು.

(7) ಪ್ರತಿಯೊಬ್ಬ ಸದಸ್ಯನು ಒಂದು ಮತವನ್ನು ಹೊಂದಿರತಕ್ಕದ್ದು ಮತ್ತು ಜೊತೆಗೆ ಸಾಮಾನ್ಯ ಪರಿಷತ್ತು ನಿರ್ಧರಿಸಬೇಕಾಗಿರುವ ಯಾವುದೇ ಪ್ರಶ್ನೆಗೆ ಸಂಬಂಧಿಸಿದಂತೆ ಮತಗಳು ಸಮನಾಗಿ ಬಂದಿದ್ದರೆ, ಅಧ್ಯಕ್ಷನು ಅಥವಾ ಸಭೆಯ ಅಧ್ಯಕ್ಷತೆ ವಹಿಸಿರುವ ವ್ಯಕ್ತಿಯು ನಿರ್ಣಾಯಕ ಮತವನ್ನು ಹೊಂದಿರತಕ್ಕದ್ದು.

(8) ಸದಸ್ಯರ ನಡುವೆ ಅಭಿಪ್ರಾಯಭೇದ ಉಂಟಾದ ಸಂದರ್ಭದಲ್ಲಿ, ಬಹುಮತದ ಅಭಿಪ್ರಾಯವು ಮಾನ್ಯತೆ ಪಡೆಯತಕ್ಕದ್ದು.

(9) ಸಾಮಾನ್ಯ ಪರಿಷತ್ತು ತುರ್ತು ಕ್ರಮಕೈಗೊಳ್ಳುವ ಅವಶ್ಯಕತೆ ಉಂಟಾದರೆ, ಅಧ್ಯಕ್ಷನು, ಸಾಮಾನ್ಯ ಪರಿಷತ್ತಿನ ಸದಸ್ಯರಿಗೆ ಪತ್ರಗಳನ್ನು ಪರಿಚಲನೆ ಮಾಡುವ ಮೂಲಕ ಕಾರ್ಯ ಕಲಾಪಗಳನ್ನು ನಡೆಸಲು ಅನುಮತಿ ನೀಡಬಹುದು. ಕೈಗೊಳ್ಳಲು ಉದ್ದೇಶಿಸಿದ ಕ್ರಮವನ್ನು ಸಾಮಾನ್ಯ ಪರಿಷತ್ತಿನ ಸದಸ್ಯರ ಬಹುಮತದ ಮೂಲಕ ಒಪ್ಪಿಗೆ ದೊರೆತ ಹೊರತು ಕೈಗೊಳ್ಳತಕ್ಕದ್ದಲ್ಲ. ಹಾಗೆ ಕೈಗೊಂಡ ಕ್ರಮದ ಬಗ್ಗೆ ಸಾಮಾನ್ಯ ಪರಿಷತ್ತಿನ ಎಲ್ಲ ಸದಸ್ಯರಿಗೆ ಕೂಡಲೇ ತಿಳಿಸತಕ್ಕದ್ದು ಮತ್ತು ಕಾಗದ ಪತ್ರಗಳನ್ನು ಸ್ಥಿರೀಕರಣಕ್ಕಾಗಿ ಸಾಮಾನ್ಯ ಪರಿಷತ್ತಿನ ಮುಂದಿನ ಸಭೆಯಲ್ಲಿ ಮಂಡಿಸತಕ್ಕದ್ದು.

**7. ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯತ್ವ.–** (1) ಕಾರ್ಯನಿರ್ವಾಹಕ ಪರಿಷತ್ತು ಈ ಮುಂದಿನ ವ್ಯಕ್ತಿಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

ಎ) [1][ಕುಲಪತಿ][1] ;

ಬಿ) ಅಧ್ಯಕ್ಷ;

ಸಿ) [1][ಕುಲಾಧಿಪತಿ][1] ಯೊಂದಿಗೆ ಸಮಾಲೋಚಿಸಿ ಶ್ರೇಷ್ಠ ಸಾಹಿತಿಗಳು, ಪ್ರಸಿದ್ಧ ಶಿಕ್ಷಣ ತಜ್ಞರು, ವಿದ್ವತ್ಪೂರ್ಣ ವೃತ್ತಿಯವರು ಅಥವಾ ಗಣ್ಯ ಸಾರ್ವಜನಿಕರ ಪೈಕಿಯಿಂದ ಭಾರತದ ಬಾರ್ ಕೌನ್ಸಿಲ್ ಟ್ರಸ್ಟ್ ನಾಮನಿರ್ದೇಶಿಸಿದ ಇಬ್ಬರು ವ್ಯಕ್ತಿಗಳು;

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಡಿ) ಸಂಘದ ಒಬ್ಬ ನಾಮನಿರ್ದೇಶಿತ ವ್ಯಕ್ತಿ;

ಇ) ಕರ್ನಾಟಕ ಸರ್ಕಾರದ ಕಾನೂನು ಕಾರ್ಯದರ್ಶಿ;

ಎಫ್) ಸಾಮಾನ್ಯ ಪರಿಷತ್ತಿನ ಸದಸ್ಯರುಗಳ ಪೈಕಿಯಿಂದ ಕರ್ನಾಟಕ ಸರ್ಕಾರವು ನಾಮನಿರ್ದೇಶಿಸಿದ ಇಬ್ಬರು ಸದಸ್ಯರು;

ಜಿ) ಭಾರತದ ಬಾರ್ ಕೌನ್ಸಿಲ್ ತನ್ನ ಸದಸ್ಯರ ಪೈಕಿಯಿಂದ ನಾಮನಿರ್ದೇಶನ ಮಾಡಿದ ಮೂವರು ಸದಸ್ಯರು;

ಹೆಚ್) ಭಾರತದ ಬಾರ್ ಕೌನ್ಸಿಲ್ ಟ್ರಸ್ಟ್ ತನ್ನ ಟ್ರಸ್ಟಿಗಳ ಪೈಕಿಯಿಂದ ನಾಮನಿರ್ದೇಶನ ಮಾಡಿದ ಇಬ್ಬರು ಸದಸ್ಯರು, ಅವರಲ್ಲಿ ಒಬ್ಬರು ವ್ಯವಸ್ಥಾಪನಾ ಟ್ರಸ್ಟಿಯಾಗಿರತಕ್ಕದ್ದು;

ಐ) ಜೇಷ್ಠತೆಯ ಅನುಸಾರವಾಗಿ ಸರದಿಯ ಮೇಲೆ ವಿದ್ಯಾಲಯದ ಬೋಧನಾ ಸಿಬ್ಬಂದಿ ಚುನಾಯಿಸಿದ ಮೂವರು ಪ್ರಾಧ್ಯಾಪಕರುಗಳು:

ಪರಂತು, ವಿದ್ಯಾಲಯದ ಒಬ್ಬ ಉದ್ಯೋಗಿಯು ಪ್ರವರ್ಗ (ಸಿ) ಅಡಿಯಲ್ಲಿ ನಾಮನಿರ್ದೇಶನಕ್ಕೆ ಅರ್ಹನಾಗಿರತಕ್ಕದ್ದಲ್ಲ.

(2) [1][ಕುಲಪತಿ][1] ಯು, ಕಾರ್ಯನಿರ್ವಾಹಕ ಪರಿಷತ್ತಿನ ಅಧ್ಯಕ್ಷನಾಗಿರತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**8. ಕಾರ್ಯನಿರ್ವಾಹಕ ಪರಿಷತ್ತಿನ ಪದಾವಧಿ.–** (1) ಒಬ್ಬ ವ್ಯಕ್ತಿಯು, ಆತನು ಹೊಂದಿರುವ ಪದದ ಅಥವಾ ನೇಮಕಾತಿಯ ಕಾರಣದಿಂದಾಗಿ ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯನಾದ ಸಂದರ್ಭದಲ್ಲಿ, ಆತನು ಪದ ಅಥವಾ ನೇಮಕಾತಿಯನ್ನು ಹೊಂದಿರುವುದು ನಿಂತುಹೋದಾಗ ಆತನ ಸದಸ್ಯತ್ವವು ಕೊನೆಗೊಳ್ಳತಕ್ಕದ್ದು.

(2) ಕಾರ್ಯನಿರ್ವಾಹಕ ಪರಿಷತ್ತಿನ ಒಬ್ಬ ಸದಸ್ಯನು, ರಾಜೀನಾಮೆ ನೀಡಿದರೆ ಅಥವಾ ಮಾನಸಿಕವಾಗಿ ಅಸ್ವಸ್ಥನಾದರೆ ಅಥವಾ ದಿವಾಳಿಯಾದರೆ ಅಥವಾ ನೈತಿಕ ಅಧಃಪತನವನ್ನು ಒಳಗೊಂಡ ಕ್ರಿಮಿನಲ್ ಅಪರಾಧದ ತಪ್ಪಿತಸ್ಥನೆಂದು ನಿರ್ಣೀತನಾದರೆ ಅಥವಾ [1][ಕುಲಪತಿ][1] ಅಥವಾ ಫ್ಯಾಕಲ್ಟಿ ಸದಸ್ಯನನ್ನು ಹೊರತುಪಡಿಸಿ ಒಬ್ಬ ಸದಸ್ಯನು ವಿದ್ಯಾಲಯದಲ್ಲಿ ಪೂರ್ಣಕಾಲಿಕ ನೇಮಕಾತಿಯನ್ನು ಅಂಗೀಕರಿಸಿದರೆ ಅಥವಾ ಕಾರ್ಯನಿರ್ವಾಹಕ ಪರಿಷತ್ತಿನ ಅಧ್ಯಕ್ಷನ ಅನುಮತಿ ಇಲ್ಲದೆ ಕಾರ್ಯನಿರ್ವಾಹಕ ಪರಿಷತ್ತಿನ ಮೂರು ಅನುಕ್ರಮ ಸಭೆಗಳಿಗೆ ಹಾಜರಾಗಲು ತಪ್ಪಿದರೆ, ಆತನು ಸದಸ್ಯನಾಗಿರುವುದು ನಿಂತುಹೋಗತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಮೇಲಿನ ಉಪಖಂಡಗಳಲ್ಲಿ ಉಪಬಂಧಿಸಲಾದಂತೆ ಕಾರ್ಯನಿರ್ವಾಹಕ ಪರಿಷತ್ತಿನ ಅವರ ಸದಸ್ಯತ್ವವನ್ನು ಈ ಹಿಂದೆಯೇ ಕೊನೆಗೊಳಿಸಿದ್ದ ಹೊರತು, ಅವರು ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯರಾದ ದಿನಾಂಕದಿಂದ ಮೂರು ವರ್ಷಗಳು ಮುಗಿದ ನಂತರ ತಮ್ಮ ಸದಸ್ಯತ್ವವನ್ನು ತ್ಯಜಿಸತಕ್ಕದ್ದು. ಆದರೆ ಅವರು ಸಂದರ್ಭಾನುಸಾರ ಪುನರ್ ನಾಮನಿರ್ದೇಶನಕ್ಕೆ ಅಥವಾ ಪುನರ್ ನೇಮಕಾತಿಗೆ ಅರ್ಹರಾಗಿರತಕ್ಕದ್ದು:

ಪರಂತು, ಪ್ರಥಮ ಕಾರ್ಯನಿರ್ವಾಹಕ ಪರಿಷತ್ತಿನ ಅವಧಿಯು ಐದು ವರ್ಷಗಳಾಗಿರತಕ್ಕದ್ದು.

(4) ಪದನಿಮಿತ್ತ ಸದಸ್ಯನನ್ನು ಹೊರತುಪಡಿಸಿ ಕಾರ್ಯನಿರ್ವಾಹಕ ಪರಿಷತ್ತಿನ ಒಬ್ಬ ಸದಸ್ಯನು, ಅಧ್ಯಕ್ಷನಿಗೆ ಪತ್ರ ಬರೆದು ತನ್ನ ಪದಕ್ಕೆ ರಾಜೀನಾಮೆ ನೀಡಬಹುದು ಮತ್ತು ಕಾರ್ಯನಿರ್ವಾಹಕ ಪರಿಷತ್ತಿನ ಅಧ್ಯಕ್ಷನು ಅಂಥ ರಾಜೀನಾಮೆಯನ್ನು ಅಂಗೀಕರಿಸಿದ ಕೂಡಲೇ ಅದು ಜಾರಿಗೆ ಬರತಕ್ಕದ್ದು.

(5) ಕಾರ್ಯನಿರ್ವಾಹಕ ಪರಿಷತ್ತಿನ ಯಾವುದೇ ಖಾಲಿ ಸ್ಥಾನವನ್ನು ಸಂದರ್ಭಾನುಸಾರ ನೇಮಕಾತಿಯ ಮೂಲಕ ಅಥವಾ ನಾಮನಿರ್ದೇಶನದ ಮೂಲಕ ಅದನ್ನು ಮಾಡಲು ಹಕ್ಕು ಹೊಂದಿರುವ ಸಂಬಂಧಪಟ್ಟ ಪ್ರಾಧಿಕಾರವು ಭರ್ತಿ ಮಾಡತಕ್ಕದ್ದು ಮತ್ತು ಖಾಲಿ ಸ್ಥಾನದ ಅವಧಿಯು ಮುಗಿದ ನಂತರ ಅಂಥ ನೇಮಕಾತಿ ಅಥವಾ ನಾಮನಿರ್ದೇಶನವು ಜಾರಿಯಲ್ಲಿರುವುದು ನಿಂತು ಹೋಗತಕ್ಕದ್ದು.

**9. ಕಾರ್ಯನಿರ್ವಾಹಕ ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** 5ನೇ ಖಂಡಕ್ಕೆ ಬಾಧಕವಾಗದಂತೆ, ಕಾರ್ಯನಿರ್ವಾಹಕ ಪರಿಷತ್ತು ಈ ಕೆಳಕಂಡ ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) [1][ಕುಲಪತಿ][1], ಕುಲಸಚಿವ, ಗ್ರಂಥಪಾಲಕ, ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು ಮತ್ತು ಅವಶ್ಯವಾಗಬಹುದಾದ ಇತರ ಬೋಧಕ ಸಿಬ್ಬಂದಿಯನ್ನು ನೇಮಕಾತಿಯ ಉದ್ದೇಶಕ್ಕಾಗಿ ವಿನಿಯಮಗಳ ಮೂಲಕ ರಚಿತವಾದ ಆಯ್ಕೆ ಸಮಿತಿಯ ಶಿಫಾರಸುಗಳ ಮೇಲೆ ಕಾಲಕಾಲಕ್ಕೆ ನೇಮಕ ಮಾಡುವುದು:

1. 2004ರ ಅಧಿನಿಯಮ 15ರ ಮೂಲಕ ದಿನಾಂಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಎರಡನೆಯ ಪರಂತುಕದ ವ್ಯಾಪ್ತಿಯಲ್ಲಿ ಬರುವ ಪ್ರಕರಣಗಳ ಹೊರತಾಗಿ ಬೋಧಕರ ಸಂಖ್ಯೆ, ಅರ್ಹತೆಗಳು ಮತ್ತು ಉಪಲಬ್ಧಿಗಳ ಕುರಿತಂತೆ ಶೈಕ್ಷಣಿಕ ಪರಿಷತ್ತಿನ ಶಿಫಾರಸುಗಳನ್ನು ಪರ್ಯಾಲೋಚಿಸಿದ ನಂತರವಲ್ಲದೆ ಅನ್ಯಥಾ ಕಾರ್ಯನಿರ್ವಾಹಕ ಪರಿಷತ್ತು ಯಾವುದೇ ಕ್ರಮವನ್ನು ಕೈಗೊಳ್ಳತಕ್ಕದ್ದಲ್ಲ:

ಮತ್ತೂ ಪರಂತು,

(ಎ) ಯಾವುದೇ ಸಂಖ್ಯಾತಿರಿಕ್ತ ಹುದ್ದೆಗೆ; ಅಥವಾ

(ಬಿ) ಪ್ರಾಧ್ಯಾಪಕ ಹುದ್ದೆಯನ್ನು ಅಂಗೀಕರಿಸಲು ಕಾರ್ಯನಿರ್ವಾಹಕ ಪರಿಷತ್ತು ಆಹ್ವಾನಿಸಿದ, ಉನ್ನತ ಶೈಕ್ಷಣಿಕ ವೈಶಿಷ್ಟ್ಯತೆ, ಪ್ರಖ್ಯಾತಿ ಮತ್ತು ವೃತ್ತೀಯ ಸಾಧನೆಯನ್ನು ಹೊಂದಿರುವ ವ್ಯಕ್ತಿಯನ್ನು ಪ್ರಾಧ್ಯಾಪಕ ಹುದ್ದೆಗೆ ನೇಮಕಮಾಡಲು ಯಾವುದೇ ಆಯ್ಕೆ ಸಮಿತಿಯನ್ನು ರಚಿಸುವ ಅಗತ್ಯವಿರತಕ್ಕದ್ದಲ್ಲ.

(2) ಆಡಳಿತ, ಲಿಪಿಕ ಮತ್ತು ಇತರ ಅವಶ್ಯ ಹುದ್ದೆಗಳನ್ನು ಸೃಜಿಸುವುದು, ಅಂಥ ಹುದ್ದೆಗಳ ಸಂಖ್ಯೆ ಮತ್ತು ಉಪಲಬ್ಧಿಗಳನ್ನು ನಿರ್ಣಯಿಸುವುದು ಅಂಥ ಹುದ್ದೆಗಳ ನೇಮಕಾತಿಗೆ ಕನಿಷ್ಠ ವಿದ್ಯಾರ್ಹತೆಗಳನ್ನು ನಿರ್ದಿಷ್ಟಪಡಿಸುವುದು ಮತ್ತು ಈ ಸಂಬಂಧದಲ್ಲಿ ಮಾಡಿರುವ ವಿನಿಯಮಗಳಿಂದ ನಿಯಮಿಸಬಹುದಾದಂಥ ಸೇವೆಯ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಅಂಥ ಹುದ್ದೆಗಳಿಗೆ ವ್ಯಕ್ತಿಗಳನ್ನು ನೇಮಕ ಮಾಡುವುದು, ಅಥವಾ ಕಾರ್ಯನಿರ್ವಾಹಕ ಪರಿಷತ್ತು ಕಾಲಕಾಲಕ್ಕೆ ನಿರ್ಣಯಗಳ ಮೂಲಕ ಸಾಮಾನ್ಯವಾಗಿ ಅಥವಾ ನಿರ್ದಿಷ್ಟವಾಗಿ ನಿರ್ದೇಶಿಸಬಹುದಾದಂಥ ಪ್ರಾಧಿಕಾರಕ್ಕೆ ಅಥವಾ ಪ್ರಾಧಿಕಾರಗಳಿಗೆ ಅಥವಾ ಅಧಿಕಾರಿ ಅಥವಾ ಅಧಿಕಾರಿಗಳಿಗೆ ನೇಮಕಾತಿಗಳ ಅಧಿಕಾರಗಳನ್ನು ಪ್ರತ್ಯಾಯೋಜಿಸುವುದು;

(3) ವಿನಿಯಮಗಳಿಗನುಸಾರವಾಗಿ ವಿದ್ಯಾಲಯದ ಯಾರೇ ಅಧಿಕಾರಿಗೆ ಸಾಂದರ್ಭಿಕ ರಜೆಯನ್ನು ಹೊರತುಪಡಿಸಿ ಇತರ ಗೈರುಹಾಜರಿ ರಜೆಯನ್ನು ಮಂಜೂರು ಮಾಡುವುದು ಮತ್ತು ಆತನ ಗೈರುಹಾಜರಿಯ ಅವಧಿಯಲ್ಲಿ ಅಂಥ ಅಧಿಕಾರಿಯ ಪ್ರಕಾರ್ಯಗಳನ್ನು ನಿರ್ವಹಿಸಲು ಅಗತ್ಯ ವ್ಯವಸ್ಥೆಗಳನ್ನು ಮಾಡುವುದು;

(4) ವಿದ್ಯಾಲಯದ ಹಣಕಾಸುಗಳು, ಲೆಕ್ಕ ಪತ್ರಗಳು, ಹೂಡಿಕೆಗಳು, ಸ್ವತ್ತು, ವ್ಯವಹಾರ ಮತ್ತು ಎಲ್ಲ ಇತರ ಆಡಳಿತ ವ್ಯವಹಾರಗಳನ್ನು ನಿರ್ವಹಿಸುವುದು ಮತ್ತು ನಿಯಂತ್ರಿಸುವುದು ಮತ್ತು ಆ ಉದ್ದೇಶಕ್ಕಾಗಿ ಅದು ಸೂಕ್ತವೆಂದು ಆಲೋಚಿಸುವಂಥ ಏಜೆಂಟರನ್ನು ನೇಮಕ ಮಾಡುವುದು;

(5) ವಿದ್ಯಾಲಯಕ್ಕೆ ಸೇರಿದ ಯಾವುದೇ ಹಣವನ್ನು, ವಿನಿಯೋಗಿಸದಿರುವ ಯಾವುದೇ ಆದಾಯಗಳೂ ಸೇರಿದಂತೆ, ಕಾಲಕಾಲಕ್ಕೆ ಅದು ಸೂಕ್ತವೆಂದು ಆಲೋಚಿಸುವಂಥ ಸ್ಟಾಕ್, ನಿಧಿಗಳು, ಷೇರುಗಳು ಅಥವಾ ಭದ್ರತೆಗಳಲ್ಲಿ ಅಥವಾ ಕಾಲಕಾಲಕ್ಕೆ ಅಂಥ ಹೂಡಿಕೆಗಳನ್ನು ವ್ಯತ್ಯಸ್ತಗೊಳಿಸುವ ಅಧಿಕಾರಗಳೊಂದಿಗೆ ಭಾರತದಲ್ಲಿ ಸ್ಥಿರ ಸ್ವತ್ತನ್ನು ಖರೀದಿಸುವಲ್ಲಿ ತೊಡಗಿಸುವುದು;

(6) ವಿದ್ಯಾಲಯದ ಪರವಾಗಿ ಯಾವುದೇ ಚರ ಮತ್ತು ಸ್ಥಿರ ಸ್ವತ್ತನ್ನು ವರ್ಗಾಯಿಸುವುದು ಅಥವಾ ವರ್ಗಾವಣೆಯನ್ನು ಒಪ್ಪಿಕೊಳ್ಳುವುದು;

(7) ವಿದ್ಯಾಲಯದ ಪರವಾಗಿ ಕರಾರುಗಳನ್ನು ಮಾಡಿಕೊಳ್ಳುವುದು, ವ್ಯತ್ಯಸ್ತಗೊಳಿಸುವುದು, ಪಾಲಿಸುವುದು ಮತ್ತು ರದ್ದುಗೊಳಿಸುವುದು ಮತ್ತು ಆ ಉದ್ದೇಶಕ್ಕಾಗಿ ಅದು ಸೂಕ್ತವೆಂದು ಆಲೋಚಿಸುವಂಥ ಅಧಿಕಾರಿಗಳನ್ನು ನೇಮಕ ಮಾಡುವುದು;

(8) ವಿದ್ಯಾಲಯದ ಕಾರ್ಯಗಳನ್ನು ನಿರ್ವಹಿಸಲು ಅಗತ್ಯವಿರುವ ಕಟ್ಟಡಗಳು, ಆವರಣಗಳು, ಪೀಠೋಪಕರಣಗಳು ಮತ್ತು ಸಲಕರಣೆಗಳನ್ನು ಮತ್ತು ಇತರ ಸಾಧನಗಳನ್ನು ಒದಗಿಸುವುದು;

(9) ನ್ಯಾಯಾಲಯದ ಕ್ರಮದ ಮೂಲಕವಲ್ಲದೆ ಅನ್ಯಥಾ ಯಾವುದೇ ಕಾರಣಕ್ಕಾಗಿ ಬಾಧಿತರಾಗಿದ್ದೇವೆಂದು ಭಾವಿಸಬಹುದಾದಂಥ ವಿದ್ಯಾಲಯದ ಅಧಿಕಾರಿಗಳ, ಶಿಕ್ಷಕರ, ವಿದ್ಯಾರ್ಥಿಗಳ ಮತ್ತು ವಿದ್ಯಾಲಯದ ಉದ್ಯೋಗಿಗಳ ಯಾವುವೇ

ಕುಂದುಕೊರತೆಗಳನ್ನು ಪುರಸ್ಕರಿಸುವುದು, ಆ ಬಗ್ಗೆ ನ್ಯಾಯ ನಿರ್ಣಯ ಮಾಡುವುದು ಮತ್ತು ಅದು ಸೂಕ್ತವೆಂದು ಭಾವಿಸಿದರೆ ಪರಿಹರಿಸುವುದು;

(10) ಪರೀಕ್ಷಕರನ್ನು ಮತ್ತು ಮಾಡರೇಟರುಗಳನ್ನು ನೇಮಕ ಮಾಡುವುದು ಮತ್ತು ಅಗತ್ಯ ಉಂಟಾದಲ್ಲಿ ಶೈಕ್ಷಣಿಕ ಪರಿಷತ್ತಿನೊಂದಿಗೆ ಸಮಾಲೋಚಿಸಿದ ನಂತರ ಅವರನ್ನು ತೆಗೆದುಹಾಕುವುದು ಮತ್ತು ಅವರ ವೇತನಗಳು, ಉಪಲಬ್ದಿಗಳು ಮತ್ತು ಪ್ರಯಾಣ ಮತ್ತು ಇತರ ಭತ್ಯಗಳನ್ನು ನಿಗದಿಪಡಿಸುವುದು;

(11) ವಿದ್ಯಾಲಯಕ್ಕೆ ಸಾಮಾನ್ಯ ಮೊಹರನ್ನು ಆಯ್ಕೆಮಾಡುವುದು ಮತ್ತು ಮೊಹರಿಗೆ ಅಭಿರಕ್ಷೆಯನ್ನು ಒದಗಿಸುವುದು; ಮತ್ತು

(12) ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಅದಕ್ಕೆ ಪ್ರದಾನ ಮಾಡಬಹುದಾದ ಅಥವಾ ವಿಧಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಅಂಥ ಇತರ ಕರ್ತವ್ಯಗಳನ್ನು ನಿರ್ವಹಿಸುವುದು.

**10. ಕಾರ್ಯನಿರ್ವಾಹಕ ಪರಿಷತ್ತಿನ ಸಭೆ.–** (1) ಕಾರ್ಯನಿರ್ವಾಹಕ ಪರಿಷತ್ತು ಕಡೇ ಪಕ್ಷ ಮೂರು ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು ಮತ್ತು ಅಂಥ ಸಭೆಗೆ ಹದಿನೈದು ದಿನಗಳಿಗಿಂತ ಕಡಿಮೆ ಇರದಂತೆ ಮುಂಚಿತವಾಗಿ ನೋಟೀಸನ್ನು ನೀಡತಕ್ಕದ್ದು.

(2) ಕಾರ್ಯನಿರ್ವಾಹಕ ಪರಿಷತ್ತಿನ ಆರು ಜನ ಸದಸ್ಯರು ಅದರ ಯಾವುದೇ ಸಭೆಗೆ ಕೋರಂ ಆಗಿರತಕ್ಕದ್ದು.

(3) ಸದಸ್ಯರ ನಡುವೆ ಅಭಿಪ್ರಾಯಭೇದ ಉಂಟಾದ ಸಂದರ್ಭದಲ್ಲಿ ಬಹುಮತದ ಅಭಿಪ್ರಾಯವು ಮಾನ್ಯತೆ ಪಡೆಯತಕ್ಕದ್ದು.

(4) ಕಾರ್ಯನಿರ್ವಾಹಕ ಪರಿಷತ್ತಿನ ಪ್ರತಿಯೊಬ್ಬ ಸದಸ್ಯರು ಒಂದು ಮತವನ್ನು ಹೊಂದಿರತಕ್ಕದ್ದು ಮತ್ತು ಕಾರ್ಯನಿರ್ವಾಹಕ ಪರಿಷತ್ತು ನಿರ್ಧರಿಸಬೇಕಾಗಿರುವ ಯಾವುದೇ ಪ್ರಶ್ನೆಗೆ ಸಂಬಂಧಿಸಿದಂತೆ ಮತಗಳು ಸಮವಾಗಿ ಬಂದಿದ್ದರೆ ಕಾರ್ಯನಿರ್ವಾಹಕ ಪರಿಷತ್ತಿನ ಅಧ್ಯಕ್ಷನು ಅಥವಾ ಸಂದರ್ಭಾನುಸಾರ ಆ ಸಭೆಯ ಅಧ್ಯಕ್ಷತೆಯನ್ನು ವಹಿಸಿರುವ ಸದಸ್ಯನು ಜೊತೆಗೆ ಒಂದು ನಿರ್ಣಾಯಕ ಮತವನ್ನು ಹೊಂದಿರತಕ್ಕದ್ದು.

(5) ಕಾರ್ಯನಿರ್ವಾಹಕ ಪರಿಷತ್ತಿನ ಪ್ರತಿಯೊಂದು ಸಭೆಗೆ [1][ಕುಲಪತಿ][1] ಯು ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಆತನ ಗೈರುಹಾಜರಿಯಲ್ಲಿ, ಹಾಜರಿರುವ ಸದಸ್ಯರು ಆ ಸಂದರ್ಭದಲ್ಲಿ ಅಧ್ಯಕ್ಷತೆ ವಹಿಸುವುದಕ್ಕಾಗಿ ಆಯ್ಕೆ ಮಾಡಿದ ಒಬ್ಬ ಸದಸ್ಯನು ಅಧ್ಯಕ್ಷತೆ ವಹಿಸತಕ್ಕದ್ದು.

(6) ಕಾರ್ಯನಿರ್ವಾಹಕ ಪರಿಷತ್ತು ತುರ್ತು ಕ್ರಮ ಕೈಗೊಳ್ಳುವ ಅಗತ್ಯತೆ ಉಂಟಾದರೆ, [1][ಕುಲಪತಿ][1] ಯು, ಕಾರ್ಯನಿವಾಹಕ ಪರಿಷತ್ತಿನ ಸದಸ್ಯರಿಗೆ ಪತ್ರಗಳನ್ನು ಪರಿಚಲನೆ ಮಾಡುವ ಮೂಲಕ ಕಾರ್ಯಕಲಾಪವನ್ನು ನಡೆಸಲು ಅನುಮತಿ ನೀಡಬಹುದು. ಕೈಗೊಳ್ಳಲು ಉದ್ದೇಶಿಸಿದ ಕ್ರಮವನ್ನು, ಕಾರ್ಯನಿರ್ವಾಹಕ ಪರಿಷತ್ತಿನ ಸದಸ್ಯರ ಬಹುಮತದ ಮೂಲಕ ಒಪ್ಪಿಗೆ ದೊರೆತ ಹೊರತು ಕೈಗೊಳ್ಳತಕ್ಕದ್ದಲ್ಲ. ಹಾಗೆ ಕೈಗೊಂಡ ಕ್ರಮವನ್ನು ಕಾರ್ಯನಿರ್ವಾಹಕ ಪರಿಷತ್ತಿನ ಎಲ್ಲ ಸದಸ್ಯರಿಗೆ ಕೂಡಲೇ ತಿಳಿಸತಕ್ಕದ್ದು. ಸ್ಥಿರೀಕರಣಕ್ಕಾಗಿ ಕಾಗದಪತ್ರಗಳನ್ನು ಕಾರ್ಯನಿರ್ವಾಹಕ ಪರಿಷತ್ತಿನ ಮುಂದಿನ ಸಭೆಯಲ್ಲಿ ಮಂಡಿಸತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**11. ಕಾರ್ಯನಿರ್ವಾಹಕ ಪರಿಷತ್ತಿನಿಂದ ಸ್ಥಾಯಿ ಸಮಿತಿಯ ರಚನೆ ಮತ್ತು ಅಡ್ – ಹಾಕ್ ಸಮಿತಿಗಳ ನೇಮಕಾತಿ.–** (1) ಈ ಅಧಿನಿಯಮದ ಮತ್ತು ಈ ಸಂಬಂಧದಲ್ಲಿ ರಚಿಸಲಾದ ವಿನಿಯಮಗಳ ಉಪಬಂಧಗಳಿಗೆ ಒಳಪಟ್ಟು, ಕಾರ್ಯನಿರ್ವಾಹಕ ಪರಿಷತ್ತು, ವಿದ್ಯಾಲಯದ ಯಾವುದೇ ಅಧಿಕಾರವನ್ನು ಚಲಾಯಿಸಲು ಅಥವಾ ಯಾವುದೇ ಪ್ರಕಾರ್ಯವನ್ನು ನಿರ್ವಹಿಸಲು ಅಥವಾ ವಿದ್ಯಾಲಯಕ್ಕೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ವಿಚಾರಣೆ ನಡೆಸಲು, ವರದಿ ಮಾಡಲು ಅಥವಾ ಸಲಹೆ ನೀಡಲು ಕಾರ್ಯನಿರ್ವಾಹಕ ಪರಿಷತ್ತು ಸೂಕ್ತವೆಂದು ಆಲೋಚಿಸುವಂಥ ಉದ್ದೇಶಗಳಿಗಾಗಿ ಮತ್ತು ಅಂಥ ಅಧಿಕಾರಗಳೊಂದಿಗೆ ನಿರ್ಣಯದ ಮೂಲಕ ಅಂಥ ಸ್ಥಾಯಿ ಸಮಿತಿಗಳನ್ನು ರಚಿಸಬಹುದು ಅಥವಾ ಅಡ್– ಹಾಕ್ ಸಮಿತಿಗಳನ್ನು ನೇಮಕ ಮಾಡಬಹುದು.

(2) ಕಾರ್ಯನಿರ್ವಾಹಕ ಪರಿಷತ್ತು, ತಾನು ಸೂಕ್ತವೆಂದು ಪರಿಗಣಿಸುವಂಥ ವ್ಯಕ್ತಿಗಳನ್ನು ಸ್ಥಾಯಿ ಸಮಿತಿಗೆ ಅಥವಾ ಅಡ್ – ಹಾಕ್ ಸಮಿತಿಗೆ ಸಹ ಸದಸ್ಯರನ್ನಾಗಿ ಸೇರಿಸಿಕೊಳ್ಳಬಹುದು ಮತ್ತು ಕಾರ್ಯನಿರ್ವಾಹಕ ಪರಿಷತ್ತಿನ ಸಭೆಗಳಿಗೆ ಹಾಜರಾಗಲು ಅವರಿಗೆ ಅನುಮತಿ ನೀಡಬಹುದು.

**12. ಕಾರ್ಯನಿರ್ವಾಹಕ ಪರಿಷತ್ತು ಅಧಿಕಾರಗಳನ್ನು ಪ್ರತ್ಯಾಯೋಜಿಸುವುದು.–** ಕಾರ್ಯನಿರ್ವಾಹಕ ಪರಿಷತ್ತು ತಾನು ಸೂಕ್ತವೆಂದು ಭಾವಿಸುವಂಥ ತನ್ನ ಅಧಿಕಾರಗಳನ್ನು, ಹಾಗೆ ಪ್ರತ್ಯಾಯೋಜಿಸಲಾಗುವ ಅಧಿಕಾರಗಳನ್ನು ಚಲಾಯಿಸುವಲ್ಲಿ [1][ಕುಲಪತಿ][1] ಯು ಅಥವಾ ಅಂಥ ಸಮಿತಿಯು ಕೈಗೊಂಡ ಕ್ರಮಗಳನ್ನು ಕಾರ್ಯನಿರ್ವಾಹಕ ಪರಿಷತ್ತಿನ ಮುಂದಿನ ಸಭೆಯಲ್ಲಿ ವರದಿ ಮಾಡತಕ್ಕದ್ದೆಂಬ ಷರತ್ತಿಗೆ ಒಳಪಟ್ಟು, ನಿರ್ಣಯದ ಮೂಲಕ [1][ಕುಲಪತಿ][1] ಗೆ ಅಥವಾ ಸಮಿತಿಗೆ ಪ್ರತ್ಯಾಯೋಜಿಸಬಹುದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**13. ಶೈಕ್ಷಣಿಕ ಪರಿಷತ್ತಿನ ಸದಸ್ಯತ್ವ.– (1) ಶೈಕ್ಷಣಿಕ ಪರಿಷತ್ತು ಈ ಮುಂದಿನ ವ್ಯಕ್ತಿಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–**

(ಎ) [1][ಕುಲಪತಿ][1] ಅದರ ಅಧ್ಯಕ್ಷನಾಗಿರತಕ್ಕದ್ದು;

(ಬಿ) [1][ಕುಲಾಧಿಪತಿ][1] ಯೊಂದಿಗೆ ಸಮಾಲೋಚಿಸಿ ಭಾರತದ ಬಾರ್ ಕೌನ್ಸಿಲ್ ನಾಮನಿರ್ದೇಶಿಸಿದ ವಿದ್ಯಾಲಯದ ಸೇವೆಯಲ್ಲಿಲ್ಲದ ಪ್ರಸಿದ್ಧ ಶಿಕ್ಷಣ ತಜ್ಞರು ಅಥವಾ ಸಾಹಿತಿಗಳು ಅಥವಾ ವಿದ್ಯಾವಂತ ವೃತ್ತಿಯಲ್ಲಿರುವ ಸದಸ್ಯರುಗಳು ಅಥವಾ ಸುಪ್ರಸಿದ್ಧ ಸಾರ್ವಜನಿಕ ವ್ಯಕ್ತಿಗಳ ಪೈಕಿ ಮೂವರು ವ್ಯಕ್ತಿಗಳು;

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಸಿ) ಕರ್ನಾಟಕ ರಾಜ್ಯದಿಂದ ನಾಮನಿರ್ದೇಶಿತನಾದ ಒಬ್ಬ ವ್ಯಕ್ತಿ;

(ಡಿ) ಭಾರತದ ಬಾರ್ ಕೌನ್ಸಿಲಿನ ಒಬ್ಬ ನಾಮನಿರ್ದೇಶಿತ ವ್ಯಕ್ತಿ;

(ಇ) ಭಾರತದ ಬಾರ್ ಕೌನ್ಸಿಲ್ ಟ್ರಸ್ಟಿನ ಒಬ್ಬ ನಾಮನಿರ್ದೇಶಿತ ವ್ಯಕ್ತಿ;

(ಎಫ್) ಎಲ್ಲ ವಿಭಾಗಗಳ ಮುಖ್ಯಸ್ಥರು, ಯಾರಾದರೂ ಇದ್ದರೆ;

(ಜಿ) ಇಲಾಖಾ ಮುಖ್ಯಸ್ಥರುಗಳು, ಯಾರಾದರೂ ಇದ್ದರೆ ಅವರನ್ನು ಹೊರತುಪಡಿಸಿ ಎಲ್ಲ ಪ್ರಾಧ್ಯಾಪಕರುಗಳು;

(ಹೆಚ್) ವಿಶ್ವವಿದ್ಯಾನಿಲಯದ ಸಹ ಮತ್ತು ಸಹಾಯಕ ಪ್ರಾಧ್ಯಾಪಕರನ್ನು ಪ್ರತಿನಿಧಿಸುವ ಬೋಧನಾ ಸಿಬ್ಬಂದಿಯ ಇಬ್ಬರು ಸದಸ್ಯರುಗಳು:

ಪರಂತು, ವಿದ್ಯಾಲಯದ ಉದ್ಯೋಗಿಯು (ಬಿ) ಪ್ರವರ್ಗದ ಅಡಿಯಲ್ಲಿ ನಾಮನಿರ್ದೇಶನಕ್ಕೆ ಅರ್ಹತೆಯನ್ನು ಹೊಂದಿರತಕ್ಕದ್ದಲ್ಲ.

(2) ಪದನಿಮಿತ್ತ ಸದಸ್ಯರುಗಳಲ್ಲದ ಸದಸ್ಯರುಗಳ ಅವಧಿಯು ಮತ್ತು (1)ನೇ ಉಪಖಂಡದ (ಎಚ್) ಬಾಬಿನಲ್ಲಿ ನಿರ್ದಿಷ್ಟಪಡಿಸಲಾದವರ ಅವಧಿಯು ಮೂರು ವರ್ಷಗಳಾಗಿರತಕ್ಕದ್ದು:

ಪರಂತು, ಮೊದಲ ಶೈಕ್ಷಣಿಕ ಪರಿಷತ್ತಿನ ಅವಧಿಯು ಐದು ವರ್ಷಗಳಾಗಿರತಕ್ಕದ್ದು.

**14. ಶೈಕ್ಷಣಿಕ ಪರಿಷತ್ತಿನ ಅಧಿಕಾರಗಳು ಮತ್ತು ಕರ್ತವ್ಯಗಳು.–** ಈ ಅಧಿನಿಯಮದ ಮತ್ತು ವಿನಿಯಮಗಳ ಉಪಬಂಧಗಳಿಗೆ ಒಳಪಟ್ಟು ಮತ್ತು ಶೈಕ್ಷಣಿಕ ಪರಿಷತ್ತು ತನ್ನಲ್ಲಿ ನಿಹಿತವಾಗಿರುವ ಎಲ್ಲ ಇತರ ಅಧಿಕಾರಗಳ ಜೊತೆಗೆ, ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) ಸಾಮಾನ್ಯ ಪರಿಷತ್ತು ಅಥವಾ ಕಾರ್ಯನಿರ್ವಾಹಕ ಪರಿಷತ್ತು ತನಗೆ ಉಲ್ಲೇಖಿಸಿದ ಅಥವಾ ಪ್ರತ್ಯಾಯೋಜಿಸಿದ ಯಾವುವೇ ವಿಷಯಗಳನ್ನು ಕುರಿತು ವರದಿ ಮಾಡುವುದು;

(2) ವಿದ್ಯಾಲಯದಲ್ಲಿ ಬೋಧನಾ ಹುದ್ದೆಗಳ ಸೃಜನೆ, ರದ್ದಿಯಾತಿ ಅಥವಾ ವರ್ಗೀಕರಣಕ್ಕೆ ಸಂಬಂಧಿಸಿದಂತೆ ಮತ್ತು ಅದಕ್ಕೆ ಅನ್ವಯಿಸುವ ಉಪಲಬ್ದಿಗಳು ಮತ್ತು ಕರ್ತವ್ಯಗಳ ಬಗ್ಗೆ ಕಾರ್ಯನಿರ್ವಾಹಕ ಪರಿಷತ್ತಿಗೆ ಶಿಫಾರಸುಗಳನ್ನು ಮಾಡುವುದು;

(3) ಫ್ಯಾಕಲ್ಟಿಗಳನ್ನು ಸಂಘಟಿಸಲು ಯೋಜನೆಗಳನ್ನು ರೂಪಿಸುವುದು, ಮಾರ್ಪಡಿಸುವುದು ಅಥವಾ ಪರಿಷ್ಕರಿಸುವುದು, ಮತ್ತು ಅಂಥ ಫ್ಯಾಕಲ್ಟಿಗಳಿಗೆ, ಅವುಗಳಿಗೆ ಸಂಬಂಧಪಟ್ಟ ವಿಷಯಗಳನ್ನು ವಹಿಸುವುದು ಮತ್ತು ಯಾವುದೇ ಫ್ಯಾಕಲ್ಟಿಯನ್ನು ರದ್ದು ಮಾಡುವ ಅಥವಾ ವಿಭಜಿಸುವ ಅಥವಾ ಒಂದು ಫ್ಯಾಕಲ್ಟಿಯನ್ನು ಮತ್ತೊಂದರೊಂದಿಗೆ ಸಂಯೋಜಿಸುವ ವಿಹಿತತೆಯ ಬಗ್ಗೆ ಕಾರ್ಯನಿರ್ವಾಹಕ ಪರಿಷತ್ತಿಗೆ ವರದಿಯನ್ನು ಸಹ ಮಾಡುವುದು;

(4) ವಿದ್ಯಾಲಯದಲ್ಲಿ ದಾಖಲಾದವರನ್ನು ಹೊರತುಪಡಿಸಿ ಇತರ ವ್ಯಕ್ತಿಗಳಿಗೆ ಶಿಕ್ಷಣ ನೀಡಲು ಮತ್ತು ಪರೀಕ್ಷೆ ನಡೆಸಲು ವಿನಿಯಮಗಳ ಮೂಲಕ ವ್ಯವಸ್ಥೆಮಾಡುವುದು;

(5) ವಿದ್ಯಾಲಯದಲ್ಲಿ ಸಂಶೋಧನೆಯನ್ನು ವೃದ್ಧಿಗೊಳಿಸುವುದು ಮತ್ತು ಅಂಥ ಸಂಶೋಧನೆಯ ಬಗ್ಗೆ ಕಾಲಕಾಲಕ್ಕೆ ವರದಿಗಳನ್ನು ಸಲ್ಲಿಸುವಂತೆ ಅಗತ್ಯಪಡಿಸುವುದು;

(6) ಫ್ಯಾಕಲ್ಟಿಗಳು ಸಲ್ಲಿಸುವ ಪ್ರಸ್ತಾವನೆಗಳನ್ನು ಪರಿಗಣಿಸುವುದು;

(7) ವಿದ್ಯಾಲಯದ ಪ್ರವೇಶಕ್ಕಾಗಿ ಸಮಿತಿಗಳನ್ನು ನೇಮಕ ಮಾಡುವುದು;

(8) ಇತರ ವಿಶ್ವವಿದ್ಯಾನಿಲಯಗಳು ಮತ್ತು ಸಂಸ್ಥೆಗಳ ಡಿಪ್ಲೋಮಗಳು ಮತ್ತು ಪದವಿಗಳಿಗೆ ಮನ್ನಣೆ ನೀಡುವುದು ಮತ್ತು ವಿದ್ಯಾಲಯದ ಡಿಪ್ಲೋಮಗಳು ಮತ್ತು ಪದವಿಗಳ ಸಂಬಂಧದಲ್ಲಿ ಅವುಗಳ ತತ್ಸಮಾನತೆಯನ್ನು ನಿರ್ಧರಿಸುವುದು;

(9) ಸಾಮಾನ್ಯ ಪರಿಷತ್ತು ಅಂಗೀಕರಿಸಿದ ಯಾವುವೇ ಷರತ್ತುಗಳಿಗೆ ಒಳಪಟ್ಟು, ಫೆಲೋಶಿಪ್, ವಿದ್ಯಾರ್ಥಿ ವೇತನ ಮತ್ತು ಇತರ ಬಹುಮಾನಗಳಿಗೆ ಸ್ಪರ್ಧೆಯ ಸಮಯ, ವಿಧಾನ ಮತ್ತು ಷರತ್ತುಗಳನ್ನು ನಿಗದಿಪಡಿಸುವುದು ಮತ್ತು ಅವುಗಳನ್ನು ಪ್ರದಾನ ಮಾಡುವುದು;

(10) ಪರೀಕ್ಷಕರ ನೇಮಕಾತಿಯ ಮತ್ತು ಅಗತ್ಯವಾದಲ್ಲಿ ಅವರನ್ನು ತೆಗೆದುಹಾಕುವ ಮತ್ತು ಅವರ ಶುಲ್ಕಗಳನ್ನು, ಉಪಲಬ್ಧಿಗಳನ್ನು ಮತ್ತು ಪ್ರಯಾಣದ ಮತ್ತು ಇತರ ವೆಚ್ಚಗಳನ್ನು ನಿಗದಿಪಡಿಸುವ ಸಂಬಂಧದಲ್ಲಿ ಕಾರ್ಯನಿರ್ವಾಹಕ ಪರಿಷತ್ತಿಗೆ ಶಿಫಾರಸುಗಳನ್ನು ಮಾಡುವುದು;

(11) ಪರೀಕ್ಷೆಗಳನ್ನು ನಡೆಸಲು ಮತ್ತು ಅವುಗಳನ್ನು ನಡೆಸುವ ದಿನಾಂಕಗಳನ್ನು ನಿಗದಿಪಡಿಸಲು ವ್ಯವಸ್ಥೆ ಮಾಡುವುದು;

(12) ವಿವಿಧ ಪರೀಕ್ಷೆಗಳ ಫಲಿತಾಂಶವನ್ನು ಘೋಷಿಸುವುದು, ಅಥವಾ ಹಾಗೆ ಮಾಡಲು ಸಮಿತಿಗಳನ್ನು ಅಥವಾ ಅಧಿಕಾರಿಗಳನ್ನು ನೇಮಕ ಮಾಡುವುದು, ಮತ್ತು ಪದವಿಗಳು, ಆನರ್ಸ್‌ಗಳು, ಡಿಪ್ಲೋಮಗಳು, ಲೈಸೆನ್ಸ್‌ಗಳು, ಬಿರುದುಗಳು ಮತ್ತು ಪ್ರಶಸ್ತಿಗಳನ್ನು ಪ್ರದಾನ ಮಾಡುವ ಅಥವಾ ನೀಡುವ ಸಂಬಂಧದಲ್ಲಿ ಶಿಫಾರಸುಗಳನ್ನು ಮಾಡುವುದು;

(13) ಸ್ಟೈಫಂಡ್‌ಗಳು, ವಿದ್ಯಾರ್ಥಿವೇತನಗಳು, ಪದಕಗಳು ಮತ್ತು ಬಹುಮಾನಗಳನ್ನು ನೀಡುವುದು ಮತ್ತು ವಿನಿಯಮಗಳು ಮತ್ತು ಪ್ರಶಸ್ತಿಗಳಿಗೆ ಅನುಬಂಧಿಸಬಹುದಾದಂಥ ಇತರ ಷರತ್ತುಗಳಿಗನುಗನುಸಾರವಾಗಿ ಇತರ ಪಾರಿತೋಷಕಗಳನ್ನು ನೀಡುವುದು;

(14) ನಿಯಮಿಸಲಾದ ಅಥವಾ ಶಿಫಾರಸು ಮಾಡಲಾದ ಪಠ್ಯ ಪುಸ್ತಕಗಳನ್ನು ಪ್ರಕಟಿಸುವುದು ಮತ್ತು ನಿಯಮಿಸಲಾದ ಅಧ್ಯಯನದ ವ್ಯಾಸಂಗ ಕ್ರಮಗಳಿಗೆ ಪಠ್ಯಕ್ರಮವನ್ನು ಪ್ರಕಟಿಸುವುದು;

(15) ವಿನಿಯಮಗಳ ಮೂಲಕ ಕಾಲಕಾಲಕ್ಕೆ ನಿಯಮಿಸುವಂಥ ನಮೂನೆಗಳು ಮತ್ತು ರಿಜಿಸ್ಟರುಗಳನ್ನು ಸಿದ್ಧಪಡಿಸುವುದು; ಮತ್ತು

(16) ಶೈಕ್ಷಣಿಕ ವಿಷಯಗಳ ಸಂಬಂಧದಲ್ಲಿ ಈ ಅಧಿನಿಯಮದ ಮತ್ತು ವಿನಿಯಮಗಳ ಉಪಬಂಧಗಳನ್ನು ಯುಕ್ತವಾಗಿ ಕಾರ್ಯಗತಗೊಳಿಸಲು ಅಗತ್ಯವಾಗಬಹುದಾದಂಥ ಎಲ್ಲ ಕರ್ತವ್ಯಗಳನ್ನು ಮತ್ತು ಅಂಥ ಎಲ್ಲ ಕಾರ್ಯಗಳನ್ನು ನಿರ್ವಹಿಸುವುದು.

**15. ಶೈಕ್ಷಣಿಕ ಪರಿಷತ್ತಿನ ಸಭೆಗಳ ಕಾರ್ಯವಿಧಾನ.–** (1) ಶೈಕ್ಷಣಿಕ ಪರಿಷತ್ತು, ಅವಶ್ಯವಿರಬಹುದಾದಷ್ಟು ಸಲ, ಆದರೆ ಒಂದು ಶೈಕ್ಷಣಿಕ ವರ್ಷದಲ್ಲಿ ಎರಡು ಸಲಕ್ಕಿಂತ ಕಡಿಮೆ ಇಲ್ಲದಂತೆ ಸಭೆ ಸೇರತಕ್ಕದ್ದು.

(2) ಶೈಕ್ಷಣಿಕ ಪರಿಷತ್ತಿನ ಸದಸ್ಯರ ಒಟ್ಟು ಸಂಖ್ಯೆಯ ಅರ್ಧದಷ್ಟು ಸದಸ್ಯರು, ಶೈಕ್ಷಣಿಕ ಪರಿಷತ್ತಿನ ಸಭೆಗೆ ಕೋರಂ ಆಗಿರತಕ್ಕದ್ದು.

(3) ಸದಸ್ಯರ ನಡುವೆ ಅಭಿಪ್ರಾಯಭೇದ ಉಂಟಾದ ಸಂದರ್ಭದಲ್ಲಿ, ಬಹುಮತದ ಅಭಿಪ್ರಾಯವು ಮಾನ್ಯತೆ ಪಡೆಯತಕ್ಕದ್ದು.

(4) ಶೈಕ್ಷಣಿಕ ಪರಿಷತ್ತಿನ ಅಧ್ಯಕ್ಷರೂ ಸೇರಿದಂತೆ, ಶೈಕ್ಷಣಿಕ ಪರಿಷತ್ತಿನ ಪ್ರತಿಯೊಬ್ಬ ಸದಸ್ಯನು ಒಂದು ಮತವನ್ನು ಹೊಂದಿರತಕ್ಕದ್ದು ಮತ್ತು ಶೈಕ್ಷಣಿಕ ಪರಿಷತ್ತು ನಿರ್ಧರಿಸಬೇಕಾಗಿರುವ ಯಾವುದೇ ಪ್ರಶ್ನೆಯ ಬಗ್ಗೆ ಸಮಾನವಾದ ಮತಗಳು ಬಂದ ಸಂದರ್ಭದಲ್ಲಿ ಶೈಕ್ಷಣಿಕ ಪರಿಷತ್ತಿನ ಅಧ್ಯಕ್ಷನು ಅಥವಾ ಸಂದರ್ಭಾನುಸಾರ ಸಭೆಯ ಅಧ್ಯಕ್ಷತೆ ವಹಿಸಿರುವ ಸದಸ್ಯನು ಜೊತೆಗೆ ಒಂದು ನಿರ್ಣಾಯಕ ಮತವನ್ನು ಹೊಂದಿರತಕ್ಕದ್ದು.

(5) ಶೈಕ್ಷಣಿಕ ಪರಿಷತ್ತಿನ ಪ್ರತಿಯೊಂದು ಸಭೆಯಲ್ಲಿ ಶೈಕ್ಷಣಿಕ ಪರಿಷತ್ತಿನ ಅಧ್ಯಕ್ಷನು ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಅವನ ಗೈರುಹಾಜರಿಯಲ್ಲಿ, ಆ ಸಂದರ್ಭದಲ್ಲಿ ಸಭೆಯಲ್ಲಿ ಅಧ್ಯಕ್ಷತೆ ವಹಿಸಲು ಆಯ್ಕೆ ಮಾಡಲಾದ ಒಬ್ಬ ಸದಸ್ಯನು ಅಧ್ಯಕ್ಷತೆ ವಹಿಸತಕ್ಕದ್ದು.

(6) ಶೈಕ್ಷಣಿಕ ಪರಿಷತ್ತು ತುರ್ತು ಕ್ರಮಕೈಗೊಳ್ಳುವ ಅವಶ್ಯಕತೆ ಉಂಟಾದರೆ, ಶೈಕ್ಷಣಿಕ ಪರಿಷತ್ತಿನ ಅಧ್ಯಕ್ಷನು ಶೈಕ್ಷಣಿಕ ಪರಿಷತ್ತಿನ ಸದಸ್ಯರಿಗೆ ಪತ್ರಗಳನ್ನು ಪರಿಚಲನೆಗೆ ಕಳುಹಿಸುವ ಮೂಲಕ ಕಾರ್ಯಕಲಾಪಗಳನ್ನು ನಡೆಸಲು ಅನುಮತಿ ನೀಡಬಹುದು. ಕೈಗೊಳ್ಳಲು ಉದ್ದೇಶಿಸಲಾದ ಕ್ರಮವನ್ನು ಶೈಕ್ಷಣಿಕ ಪರಿಷತ್ತಿನ ಸದಸ್ಯರ ಬಹುಮತ ಒಪ್ಪಿಗೆ ದೊರೆತ ಹೊರತು ಕೈಗೊಳ್ಳತಕ್ಕದ್ದಲ್ಲ. ಹಾಗೆ ಕೈಗೊಂಡ ಕ್ರಮವನ್ನು ಶೈಕ್ಷಣಿಕ ಪರಿಷತ್ತಿನ ಎಲ್ಲ ಸದಸ್ಯರಿಗೆ ಕೂಡಲೇ ತಿಳಿಸತಕ್ಕದ್ದು. ಸ್ಥಿರೀಕರಣಕ್ಕಾಗಿ ಕಾಗದಪತ್ರಗಳನ್ನು ಶೈಕ್ಷಣಿಕ ಪರಿಷತ್ತಿನ ಮುಂದಿನ ಸಭೆಯಲ್ಲಿ ಮಂಡಿಸತಕ್ಕದ್ದು.

**16. ಹಣಕಾಸು ಸಮಿತಿ.–** (1) ಈ ಮುಂದಿನವರನ್ನು ಒಳಗೊಂಡ ಕಾರ್ಯನಿರ್ವಾಹಕ ಪರಿಷತ್ತು ರಚಿಸಿದ ಒಂದು ಹಣಕಾಸು ಸಮಿತಿ ಇರತಕ್ಕದ್ದು, ಎಂದರೆ:–

(ಎ) ವಿದ್ಯಾಲಯದ ಖಜಾಂಚಿ;

(ಬಿ) [1][ಕುಲಪತಿ][1] ;

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಸಿ) ಕಾಯನಿರ್ವಾಹಕ ಪರಿಷತ್ತು ತನ್ನ ಸದಸ್ಯರುಗಳ ಪೈಕಿಯಿಂದ ನಾಮನಿರ್ದೇಶಿಸಿದ ಮೂವರು ಸದಸ್ಯರು, ಅವರಲ್ಲಿ ಕನಿಷ್ಠ ಒಬ್ಬ ವ್ಯಕ್ತಿ ಭಾರತದ ಬಾರ್ ಕೌನ್ಸಿಲಿಗೆ ಮತ್ತೊಬ್ಬ ವ್ಯಕ್ತಿ ಕರ್ನಾಟಕ ಸರ್ಕಾರಕ್ಕೆ ಸೇರಿದವರಾಗಿರುತ್ತಾರೆ;

(2) [1][ಕುಲಪತಿ][1] ಯನ್ನು ಹೊರತುಪಡಿಸಿ ಹಣಕಾಸು ಸಮಿತಿಯ ಸದಸ್ಯರುಗಳು ಮೂರು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಹಣಕಾಸು ಸಮಿತಿಯ ಪ್ರಕಾರ್ಯಗಳು ಮತ್ತು ಕರ್ತವ್ಯಗಳು ಈ ಮುಂದಿನಂತಿರತಕ್ಕದ್ದು, ಎಂದರೆ:–

(ಎ) ವಿದ್ಯಾಲಯದ ವಾರ್ಷಿಕ ಬಜೆಟನ್ನು ಪರಿಶೀಲಿಸುವುದು ಮತ್ತು ಪರಿಷ್ಕರಿಸುವುದು ಮತ್ತು ಕಾರ್ಯನಿರ್ವಾಹಕ ಪರಿಷತ್ತಿನ ಹಣಕಾಸು ವಿಷಯಗಳ ಬಗ್ಗೆ ಶಿಫಾರಸುಗಳನ್ನು ಮಾಡುವುದು;

(ಬಿ) ಹೊಸ ವೆಚ್ಚಕ್ಕಾಗಿ ಎಲ್ಲ ಪ್ರಸ್ತಾವಗಳನ್ನು ಪರ್ಯಾಲೋಚಿಸುವುದು ಮತ್ತು ಕಾರ್ಯನಿರ್ವಾಹಕ ಪರಿಷತ್ತಿಗೆ ಶಿಫಾರಸುಗಳನ್ನು ಮಾಡುವುದು;

(ಸಿ) ಲೆಕ್ಕಪತ್ರಗಳ ನಿಯತಕಾಲಿಕ ವಿವರಪಟ್ಟಿಗಳನ್ನು ಪರಿಶೀಲಿಸುವುದು ಮತ್ತು ಕಾಲಕಾಲಕ್ಕೆ ವಿದ್ಯಾಲಯದ ಹಣಕಾಸು ವ್ಯವಸ್ಥೆಯನ್ನು ಪುನರವಲೋಕಿಸುವುದು ಮತ್ತು ಪುನರ್ ವಿನಿಯೋಗದ ವಿವರಪಟ್ಟಿಗಳನ್ನು ಮತ್ತು ಲೆಕ್ಕಪರಿಶೋಧನಾ ವರದಿಗಳನ್ನು ಪರಿಶೀಲಿಸುವುದು ಮತ್ತು ಕಾರ್ಯನಿರ್ವಾಹಕ ಪರಿಷತ್ತಿಗೆ ಶಿಫಾರಸುಗಳನ್ನು ಮಾಡುವುದು;

(ಡಿ) ವಿದ್ಯಾಲಯದ ಮೇಲೆ ಪರಿಣಾಮ ಬೀರುವ ಯಾವುದೇ ಹಣಕಾಸಿನ ಪ್ರಶ್ನೆಯ ಬಗ್ಗೆ ತಾನೇ ಸ್ವತಃ ಅಥವಾ ಕಾರ್ಯನಿರ್ವಾಹಕ ಪರಿಷತ್ತು ಅಥವಾ [1][ಕುಲಪತಿ][1] ಯು ಅಭಿಪ್ರಾಯ ಕೋರಿದ ತರುವಾಯ ತನ್ನ ಅಭಿಪ್ರಾಯಗಳನ್ನು ನೀಡುವುದು ಮತ್ತು ಕಾರ್ಯನಿರ್ವಾಹಕ ಪರಿಷತ್ತಿಗೆ ಶಿಫಾರಸುಗಳನ್ನು ಮಾಡುವುದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(4) ಹಣಕಾಸು ಸಮಿತಿಯು ಪ್ರತಿವರ್ಷ ಕನಿಷ್ಠ ಎರಡು ಸಲವಾದರೂ ಸಭೆ ಸೇರತಕ್ಕದ್ದು, ಮೂವರು ಸದಸ್ಯರು ಹಣಕಾಸು ಸಮಿತಿಗೆ ಕೋರಂ ಆಗಿರತಕ್ಕದ್ದು.

(5) ಖಜಾಂಚಿಯು, ಹಣಕಾಸು ಸಮಿತಿಯ ಸಭೆಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಅವರ ಗೈರುಹಾಜರಿಯಲ್ಲಿ [1][ಕುಲಪತಿ][1] ಯು ಅಧ್ಯಕ್ಷತೆಯನ್ನು ವಹಿಸತಕ್ಕದ್ದು, ಸದಸ್ಯರುಗಳ ನಡುವೆ ಅಭಿಪ್ರಾಯಬೇಧ ಉಂಟಾದ ಸಂದರ್ಭದಲ್ಲಿ, ಹಾಜರಿರುವ ಸದಸ್ಯರ ಬಹುಮತದ ಅಭಿಪ್ರಾಯವು ಮಾನ್ಯತೆ ಪಡೆಯತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**17. ಆಯ್ಕೆ ಸಮಿತಿ.–** (1) ವಿದ್ಯಾಲಯದ ಪ್ರಾಧ್ಯಾಪಕರುಗಳು, ಸಹ ಪ್ರಾಧ್ಯಾಪಕರು ಮತ್ತು ಇತರ ಬೋಧಕರ ಹುದ್ದೆಗಳ ನೇಮಕಾತಿಗಾಗಿ ಕಾರ್ಯನಿರ್ವಾಹಕ ಪರಿಷತ್ತಿಗೆ ಶಿಫಾರಸುಗಳನ್ನು ಮಾಡಲು ಕಾರ್ಯನಿರ್ವಾಹಕ ಪರಿಷತ್ತು ಆಯ್ಕೆ ಸಮಿತಿಯನ್ನು ರಚಿಸತಕ್ಕದ್ದು.

(2) ಆಯ್ಕೆ ಸಮಿತಿಯು ಈ ಮುಂದಿನ ಸದಸ್ಯರುಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) [1][ಕುಲಪತಿ][1] ಯು ಸಮಿತಿಯ ಅಧ್ಯಕ್ಷನಾಗಿರತಕ್ಕದ್ದು;

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) ಅಧ್ಯಕ್ಷ;

(ಸಿ) ಸಂಬಂಧಪಟ್ಟ ವಿಭಾಗಗಳ ಮುಖ್ಯಸ್ಥ ಯಾರಾದರೂ ಇದ್ದರೆ, ಅವರು, ಆದರೆ ತಾನು ಆಯ್ಕೆ ಮಾಡಬೇಕಾಗಿರುವ ಹುದ್ದೆಯ ಸ್ಥಾನಕ್ಕಿಂತ ಕಡಿಮೆಯದಲ್ಲದ ಹುದ್ದೆಯನ್ನು ಆತನು ಹೊಂದಿರಬೇಕು;

(ಡಿ) ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು ಮತ್ತು ಸಹಾಯಕ ಪ್ರಾಧ್ಯಾಪಕರುಗಳನ್ನು ಆಯ್ಕೆ ಮಾಡಲು ಶೈಕ್ಷಣಿಕ ಪರಿಷತ್ತು ಶಿಫಾರಸು ಮಾಡಿದ ಮತ್ತು ಕಾರ್ಯನಿರ್ವಾಹಕ ಪರಿಷತ್ತು ಅನುಮೋದಿಸಿದ ಹೆಸರುಗಳ ಪಟ್ಟಿಯ ಪೈಕಿಯಿಂದ [1][ಕುಲಪತಿ][1] ಯು ನಾಮನಿರ್ದೇಶನ ಮಾಡಿದ ಮೂವರು ತಜ್ಞರು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಅಗತ್ಯವಿರುವಾಗಲೆಲ್ಲ [1][ಕುಲಪತಿ][1] ಯು ಆಯ್ಕೆ ಸಮಿತಿಯ ಸಭೆಯನ್ನು ಕರೆಯತಕ್ಕದ್ದು. [1][ಕುಲಪತಿ][1] ಯು ಆಯ್ಕೆ ಸಮಿತಿಯ ಸಭೆಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು. ಮೂವರು ಸದಸ್ಯರು ಸಭೆಗೆ ಕೋರಂ ಆಗಿರತಕ್ಕದ್ದು. ಅವರ ಪೈಕಿ ಒಬ್ಬನು ಆಯ್ಕೆ ಸಮಿತಿಯ ತಜ್ಞನಾಗಿರಬೇಕು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**18. [1][ಕುಲಪತಿ][1].–** (1) ವಿದ್ಯಾಲಯದ ನೇಮಕಾತಿಯ ಸಂಬಂಧದಲ್ಲಿ ಮಾಡಲಾದ ವಿನಿಯಮಗಳಿಗನುಸಾರವಾಗಿ ಮತ್ತು [1][ಕುಲಾಧಿಪತಿ][1] ಯೊಂದಿಗೆ ಸಮಾಲೋಚಿಸಿ, ಕಾರ್ಯನಿರ್ವಾಹಕ ಪರಿಷತ್ತು [1][ಕುಲಪತಿ][1] ಯನ್ನು ನೇಮಕ ಮಾಡತಕ್ಕದ್ದು:

ಪರಂತು, ಪ್ರಥಮ [1][ಕುಲಪತಿ][1] ಯನ್ನು ಭಾರತದ ಬಾರ್ ಕೌನ್ಸಿಲಿನ ಅನುಮೋದನೆ ಪಡೆದು ಸಂಘವು ನೇಮಕಮಾಡತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಕಾರ್ಯನಿರ್ವಾಹಕ ಪರಿಷತ್ತಿನ ನಿರ್ದಿಷ್ಟ ಮತ್ತು ಸಾಮಾನ್ಯ ನಿರ್ದೇಶನಗಳಿಗೆ ಒಳಪಟ್ಟು, [1][ಕುಲಪತಿ][1] ಯು ವಿದ್ಯಾಲಯದ ವ್ಯವಸ್ಥಾಪನೆ ಮತ್ತು ಆಡಳಿತದ ಸಂಬಂಧದಲ್ಲಿ ಕಾರ್ಯನಿರ್ವಾಹಕ ಪರಿಷತ್ತಿನ ಎಲ್ಲ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಒಬ್ಬ ಶೈಕ್ಷಣಿಕ ವ್ಯಕ್ತಿಯಾಗಿರತಕ್ಕ ಮತ್ತು ವಿದ್ಯಾಲಯದಲ್ಲಿ ಕಾನೂನಿನ ಪ್ರಾಧ್ಯಾಪಕನಾಗಿರತಕ್ಕ [1][ಕುಲಪತಿ][1] ಯು ಐದು ವರ್ಷಗಳ ಅವಧಿಯವರೆಗೆ ಪದಧಾರಣೆ ಮಾಡತಕ್ಕದ್ದು ಮತ್ತು ಆ ಅವಧಿಯನ್ನು ಕಾರ್ಯನಿರ್ವಾಹಕ ಪರಿಷತ್ತು ಆ ಸಂಬಂಧದಲ್ಲಿ ನಿರ್ಣಯದ ಮೂಲಕ ಅಥವಾ ಶಿಕ್ಷಕ ಸಿಬ್ಬಂದಿಯ ಸದಸ್ಯರ ನಿವೃತ್ತಿ ವಯಸ್ಸಿನವರೆಗೆ, ಇವುಗಳಲ್ಲಿ ಯಾವುದು

ಮುಂಚಿತವೋ ಅಲ್ಲಿಯವರೆಗೆ ನವೀಕರಿಸತಕ್ಕದ್ದು. ಈ ಅವಧಿಯು ಮುಗಿದ ನಂತರ, ಆತನು ತನ್ನ ಉತ್ತರಾಧಿಕಾರಿಯು ನೇಮಕವಾಗುವವರೆಗೆ ಮತ್ತು ಆತನು ಪದವನ್ನು ಸ್ವೀಕರಿಸುವವರೆಗೆ ಆ ಪದದಲ್ಲಿ ಮುಂದುವರಿಯತಕ್ಕದ್ದು.

(4) [1][ಕುಲಪತಿ][1] ಯು,–

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಎ) ಈ ಅಧಿನಿಯಮದ ಮತ್ತು ವಿನಿಯಮಗಳ ಉಪಬಂಧಗಳನ್ನು ಕ್ರಮಬದ್ಧವಾಗಿ ಪಾಲಿಸಲಾಗಿದೆ ಯೆಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು ಮತ್ತು ಆ ಉದ್ದೇಶಕ್ಕಾಗಿ ಆತನು ಅಗತ್ಯವಿರುವ ಎಲ್ಲ ಅಧಿಕಾರಗಳನ್ನು ಹೊಂದಿರತಕ್ಕದ್ದು.

(ಬಿ) ಸಾಮಾನ್ಯ ಪರಿಷತ್ತು, ಕಾರ್ಯನಿರ್ವಾಹಕ ಪರಿಷತ್ತು, ಶೈಕ್ಷಣಿಕ ಪರಿಷತ್ತಿನ ಸಭೆಗಳನ್ನು ಕರೆಯತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸಲು ಅಗತ್ಯವಾಗಬಹುದಾದಂಥ ಇತರ ಎಲ್ಲ ಕಾರ್ಯಗಳನ್ನು ನಿರ್ವಹಿಸತಕ್ಕದ್ದು;

(ಸಿ) ವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧವಾಗಿ ಹೂಡಿರುವ ದಾವೆಗಳಲ್ಲಿ ಅಥವಾ ವ್ಯವಹರಣೆಗಳಲ್ಲಿ ವಿದ್ಯಾಲಯವನ್ನು ಪ್ರತಿನಿಧಿಸತಕ್ಕದ್ದು, ಮುಖ್ತ್ಯಾರನಾಮೆಗೆ ಸಹಿ ಮಾಡತಕ್ಕದ್ದು ಮತ್ತು ವಾದಪತ್ರಗಳನ್ನು ಸತ್ಯಾಪನೆ ಮಾಡತಕ್ಕದ್ದು ಅಥವಾ ಆ ಉದ್ದೇಶಕ್ಕಾಗಿ ಪ್ರತಿನಿಧಿಗಳನ್ನು ಪ್ರತ್ಯಾಯೋಜಿಸತಕ್ಕದ್ದು;

(ಡಿ) ವಿದ್ಯಾಲಯದ ಶಿಸ್ತನ್ನು ಸೂಕ್ತ ರೀತಿಯಲ್ಲಿ ಕಾಪಾಡುವುದಕ್ಕೆ ಸಂಬಂಧಪಟ್ಟ ಎಲ್ಲ ಅಧಿಕಾರಗಳನ್ನು ಹೊಂದಿರತಕ್ಕದ್ದು;

(5) ತುರ್ತು ಕ್ರಮ ತೆಗೆದುಕೊಳ್ಳಬೇಕಾದ ಅಗತ್ಯವಿರುವ ಯಾವುದೇ ಪರಿಸ್ಥಿತಿ ಉದ್ಭವಿಸಿದೆ ಎಂದು [1][ಕುಲಪತಿ][1]ಯು ಅಭಿಪ್ರಾಯಪಡುವಲ್ಲಿ, ಆತನು ಅವಶ್ಯವೆಂದು ಭಾವಿಸುವಂಥ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು ಮತ್ತು ಅದನ್ನು ಸ್ಥಿರೀಕರಣೆಗಾಗಿ ಸಾಮಾನ್ಯ ಕ್ರಮದಲ್ಲಿ ಆ ವಿಷಯದ ಬಗ್ಗೆ ವ್ಯವಹರಿಸುತ್ತಿದ್ದಿರಬಹುದಾದ ಪ್ರಾಧಿಕಾರದ ಮುಂದಿನ ಸಭೆಯಲ್ಲಿ ವರದಿ ಮಾಡತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**19. ವಿಭಾಗಗಳ ಮುಖ್ಯಸ್ಥರು.–** (1) ವಿದ್ಯಾಲಯದ ಪ್ರತಿಯೊಂದು ವಿಭಾಗಕ್ಕೆ ವಿಭಾಗದ ಮುಖ್ಯಸ್ಥರು ಇರತಕ್ಕದ್ದು.

(2) ವಿಭಾಗಗಳ ಮುಖ್ಯಸ್ಥರ ಅಧಿಕಾರಗಳು, ಪ್ರಕಾರ್ಯಗಳು, ನೇಮಕಾತಿಗಳು ಮತ್ತು ಸೇವಾ ಷರತ್ತುಗಳು, ವಿನಿಯಮಗಳ ಮೂಲಕ ನಿಯಮಿಸಲಾದಂತೆ ಇರತಕ್ಕದ್ದು.

**20. ಕುಲಸಚಿವ.–** (1) ಕುಲಸಚಿವನನ್ನು ಕಾರ್ಯನಿರ್ವಾಹಕ ಪರಿಷತ್ತು ನೇಮಕ ಮಾಡತಕ್ಕದ್ದು ಮತ್ತು ಆತನು ವಿದ್ಯಾಲಯದ ಪೂರ್ಣಾವಧಿ ಅಧಿಕಾರಿಯಾಗಿರತಕ್ಕದ್ದು. ಕುಲಸಚಿವನ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ವಿನಿಯಮಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

(2) ಕುಲಸಚಿವನು ಕಾರ್ಯನಿರ್ವಾಹಕ ಪರಿಷತ್ತು, ಶೈಕ್ಷಣಿಕ ಪರಿಷತ್ತು, ಹಣಕಾಸು ಸಮಿತಿಯ ಮತ್ತು ಫ್ಯಾಕಲ್ಟಿಗಳ ಪದನಿಮಿತ್ತ ಕಾರ್ಯದರ್ಶಿಯಾಗಿರತಕ್ಕದ್ದು. ಆದರೆ ಅವರು ಈ ಯಾವುವೇ ಪ್ರಾಧಿಕಾರಗಳ ಒಬ್ಬ ಸದಸ್ಯರಾಗಿರುವರೆಂದು ಭಾವಿಸತಕ್ಕದ್ದಲ್ಲ.

**(3) ಕುಲಸಚಿವನು,–**

(ಎ) ಕಾರ್ಯನಿರ್ವಾಹಕ ಪರಿಷತ್ತು ಮತ್ತು [1][ಕುಲಪತಿ][1] ಯ ಎಲ್ಲ ನಿರ್ದೇಶನಗಳು ಮತ್ತು ಆದೇಶಗಳನ್ನು ಪಾಲಿಸತಕ್ಕದ್ದು;

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) ಕಾರ್ಯನಿರ್ವಾಹಕ ಪರಿಷತ್ತು ತನ್ನ ಸುಪರ್ದಿಗೆ ಒಪ್ಪಿಸತಕ್ಕ ದಾಖಲೆಗಳು, ಸಾಮಾನ್ಯ ಮೊಹರು ಮತ್ತು ವಿದ್ಯಾಲಯದ ಇತರ ಸ್ವತ್ತುಗಳ ಅಭಿರಕ್ಷಕನಾಗಿರತಕ್ಕದ್ದು;

(ಸಿ) ಕಾರ್ಯನಿರ್ವಾಹಕ ಪರಿಷತ್ತು, ಶೈಕ್ಷಣಿಕ ಪರಿಷತ್ತು, ಹಣಕಾಸು ಸಮಿತಿ, ಫ್ಯಾಕಲ್ಟಿಗಳು, ಅಧ್ಯಯನಗಳ ಮಂಡಲಿ ಮತ್ತು ವಿದ್ಯಾಲಯದ ಪ್ರಾಧಿಕಾರಗಳಿಂದ ನೇಮಕಗೊಂಡ ಯಾವುದೇ ಸಮಿತಿಯ ಸಭೆಗಳನ್ನು ಕರೆಯುವ ಎಲ್ಲ ನೋಟೀಸುಗಳನ್ನು ಹೊರಡಿಸುವುದು;

(ಡಿ) ಕಾರ್ಯನಿರ್ವಾಹಕ ಪರಿಷತ್ತು, ಶೈಕ್ಷಣಿಕ ಪರಿಷತ್ತು, ಹಣಕಾಸು ಸಮಿತಿ, ಫ್ಯಾಕಲ್ಟಿಗಳು ಮತ್ತು ವಿದ್ಯಾಲಯದ ಪ್ರಾಧಿಕಾರದಿಂದ ನೇಮಕಗೊಂಡ ಯಾವುದೇ ಸಮಿತಿಯ ಎಲ್ಲ ಸಭೆಗಳ ನಡವಳಿಗಳ ಸಂಕ್ಷಿಪ್ತ ದಾಖಲೆಗಳನ್ನು ಇಡತಕ್ಕದ್ದು;

(ಇ) ಕಾರ್ಯನಿರ್ವಾಹಕ ಪರಿಷತ್ತು ಮತ್ತು ಶೈಕ್ಷಣಿಕ ಪರಿಷತ್ತಿನ ಅಧಿಕೃತ ಪತ್ರ ವ್ಯವಹಾರಗಳನ್ನು ನಡೆಸುವುದು;

(ಎಫ್) [1][ಕುಲಾಧಿಪತಿ][1] ಗೆ ವಿದ್ಯಾಲಯದ ಪ್ರಾಧಿಕಾರಗಳ ಸಭೆಗಳ ಕಾರ್ಯಸೂಚಿಯ ಪ್ರತಿಗಳನ್ನು, ಅವುಗಳನ್ನು ಹೊರಡಿಸಿದ ಕೂಡಲೇ ಮತ್ತು ಪ್ರಾಧಿಕಾರಗಳ ಸಭೆಗಳ ನಡವಳಿಗಳ ಸಂಕ್ಷಿಪ್ತ ದಾಖಲೆಯನ್ನು ಸಾಮಾನ್ಯವಾಗಿ ಸಭೆ ನಡೆದ ಒಂದು ತಿಂಗಳ ಒಳಗೆ ಕಳುಹಿಸತಕ್ಕದ್ದು;

(ಜಿ) ತುರ್ತು ಸಂದರ್ಭದಲ್ಲಿ, [1][ಕುಲಪತಿ][1]ಯಾಗಲಿ ಅಥವಾ ವಿಧ್ಯುಕ್ತವಾಗಿ ಅಧಿಕಾರ ಪಡೆದ ಅಧಿಕಾರಿಯಾಗಲಿ ಕ್ರಮ ತೆಗೆದುಕೊಳ್ಳಲು ಮತ್ತು ವಿದ್ಯಾಲಯದ ಕೆಲಸಕಾರ್ಯಗಳನ್ನು ನಿರ್ವಹಿಸಲು ಅದರ ನಿರ್ದೇಶನಗಳನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲದಿರುವಾಗ, ತಕ್ಷಣವೇ ಕಾರ್ಯನಿರ್ವಾಹಕ ಪರಿಷತ್ತಿನ ಸಭೆಯನ್ನು ಕರೆಯತಕ್ಕದ್ದು;

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಎಚ್) [1][ಕುಲಪತಿ][1] ಯು ತನ್ನ ಕರ್ತವ್ಯಗಳನ್ನು ಮತ್ತು ಪ್ರಕಾರ್ಯಗಳನ್ನು ಸರಿಯಾಗಿ ನಿರ್ವಹಿಸಲು ನೇರವಾಗಿ ಜವಾಬ್ದಾರನಾಗಿರತಕ್ಕದ್ದು; ಮತ್ತು

(ಐ) ಕಾರ್ಯನಿರ್ವಾಹಕ ಪರಿಷತ್ತು ಅಥವಾ [1][ಕುಲಪತಿ][1] ಯು ಕಾಲಕಾಲಕ್ಕೆ ವಹಿಸಿಕೊಡಬಹುದಾದಂಥ ಇತರ ಕರ್ತವ್ಯಗಳನ್ನು ನಿರ್ವಹಿಸುವುದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(4) ಯಾವುದೇ ಕಾರಣದಿಂದ ಕುಲಸಚಿವನ ಹುದ್ದೆಯು ಖಾಲಿ ಇರುವ ಸಂದರ್ಭದಲ್ಲಿ, [1][ಕುಲಪತಿ][1] ಯು ಸೂಕ್ತವೆಂದು ಭಾವಿಸುವಂಥ ಕುಲಸಚಿವರ ಅಧಿಕಾರಗಳನ್ನು ಚಲಾಯಿಸಲು, ಪ್ರಕಾರ್ಯಗಳನ್ನು ಮತ್ತು ಕರ್ತವ್ಯಗಳನ್ನು ನಿರ್ವಹಿಸಲು ವಿದ್ಯಾಲಯದ ಸೇವೆಯಲ್ಲಿರುವ ಯಾರೇ ಅಧಿಕಾರಿಗೆ ಪ್ರಾಧಿಕರಿಸಲು, [1][ಕುಲಪತಿ][1] ಗೆ ಮುಕ್ತ ಅವಕಾಶ ಇರತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**21. ಇತರ ಅಧಿಕಾರಿಗಳು ಮತ್ತು ನೌಕರರು.–** (1) ಸೇವಾ ಷರತ್ತುಗಳ ಉದ್ದೇಶಕ್ಕಾಗಿ ಮಾಡಲಾದ ವಿನಿಯಮಗಳಿಗೆ ಒಳಪಟ್ಟು, ವಿದ್ಯಾಲಯದ ಪ್ರತಿಯೊಬ್ಬ ಇತರ ಅಧಿಕಾರಿ ಅಥವಾ ನೌಕರನು, ವಿನಿಯಮಗಳ ಮೂಲಕ ನಿಯಮಿಸಲಾದಂತೆ ಸೇವಾ ಷರತ್ತುಗಳನ್ನು ನಿರೂಪಿಸುವ ಲಿಖಿತ ಕರಾರಿನ ಮೇರೆಗೆ ನೇಮಕ ಮಾಡಿಕೊಳ್ಳತಕ್ಕದ್ದು ಮತ್ತು ಆ ಲಿಖಿತ ಕರಾರನ್ನು ವಿದ್ಯಾಲಯದಲ್ಲಿ ಇಡತಕ್ಕದ್ದು ಮತ್ತು ಸಂಬಂಧಪಟ್ಟ ಅಧಿಕಾರಿಗೆ ಅಥವಾ ನೌಕರನಿಗೆ ಅದರ ಒಂದು ಪ್ರತಿಯನ್ನು ಒದಗಿಸತಕ್ಕದ್ದು.

(2) ವಿದ್ಯಾಲಯದ ಮತ್ತು ಅದರ ಯಾರೇ ಅಧಿಕಾರಿಗಳು ಅಥವಾ ನೌಕರರ ನಡುವೆ, ಕರಾರಿನ ಸಂಬಂಧದಲ್ಲಿ ಉಂಟಾದ ಯಾವುದೇ ವಿವಾದವನ್ನು ಸಂಬಂಧಪಟ್ಟ ಅಧಿಕಾರಿಯ ಅಥವಾ ನೌಕರನ ಕೋರಿಕೆಯ ಮೇರೆಗೆ, ಅಥವಾ ವಿದ್ಯಾಲಯದ ಸೂಚನೆಯ ಮೇರೆಗೆ, ವಿನಿಯಮಗಳಲ್ಲಿ ನಿಯಮಿಸಲಾದಂತೆ ಮಧ್ಯಸ್ಥಿಕೆಗಾಗಿ ಕಾರ್ಯನಿರ್ವಾಹಕ ಪರಿಷತ್ತು ನೇಮಕ ಮಾಡಿದ ಮೂವರು ಸದಸ್ಯರುಗಳನ್ನು ಒಳಗೊಂಡ ನ್ಯಾಯಾಧಿಕರಣಕ್ಕೆ ಉಲ್ಲೇಖಿಸತಕ್ಕದ್ದು.

**22. ಭವಿಷ್ಯ ನಿಧಿ, ಉಪದಾನ, ನಿವೃತ್ತಿ ವೇತನ ಮತ್ತು ಯಾವುದೇ ಇತರ ಸೌಲಭ್ಯ ಯೋಜನೆ.–** ವಿದ್ಯಾಲಯದ ಎಲ್ಲ ಖಾಯಂ ನೌಕರರು, ಕಾರ್ಯನಿರ್ವಾಹಕ ಪರಿಷತ್ತು ಈ ಸಂಬಂಧದಲ್ಲಿ ರಚಿಸಬಹುದಾದಂಥ ವಿನಿಯಮಗಳಿಗನುಸಾರವಾಗಿ ಭವಿಷ್ಯ ನಿಧಿ ಮತ್ತು ಉಪದಾನ ಸೌಲಭ್ಯಗಳನ್ನು ಪಡೆಯಲು ಹಕ್ಕು ಹೊಂದಿರತಕ್ಕದ್ದು.

**23. ವಿದ್ಯಾಲಯದ ನಿಧಿಗಳು.–** (1) ವಿದ್ಯಾಲಯಕ್ಕಾಗಿ, ವಿದ್ಯಾಲಯದ ಒಂದು ನಿಧಿ ಇರತಕ್ಕದ್ದು ಮತ್ತು ಈ ಮುಂದಿನವುಗಳನ್ನು ಒಳಗೊಳ್ಳತಕ್ಕದ್ದು,–

(ಎ) ರಾಜ್ಯ ಸರ್ಕಾರಗಳು ನೀಡಿದ ಯಾವುದೇ ವಂತಿಗೆ ಅಥವಾ ಅನುದಾನ ;

(ಬಿ) ವಿಶ್ವವಿದ್ಯಾನಿಲಯದ ಅನುದಾನಗಳ ಆಯೋಗ ಅಥವಾ ಕೇಂದ್ರ ಸರ್ಕಾರವು ನೀಡಿದ ಯಾವುದೇ ವಂತಿಗೆ ಅಥವಾ ಅನುದಾನ;

(ಸಿ) ಭಾರತದ ಬಾರ್ ಕೌನ್ಸಿಲ್ ನೀಡಿದ ಯಾವುದೇ ವಂತಿಗೆ;

(ಡಿ) ಭಾರತದ ಬಾರ್ ಕೌನ್ಸಿಲ್ ಟ್ರಸ್ಟ್ ನೀಡಿದ ಯಾವುದೇ ವಂತಿಗೆ;

(ಇ) ರಾಜ್ಯ ಬಾರ್ ಕೌನ್ಸಿಲುಗಳು ನೀಡಿದ ಯಾವುದೇ ವಂತಿಗೆ;

(ಎಫ್) ಖಾಸಗಿ ವ್ಯಕ್ತಿಗಳು ಅಥವಾ ಸಂಸ್ಥೆಗಳು ನೀಡಿದ ಯಾವುವೇ ಮರಣಶಾಸನದಾನಗಳು, ದೇಣಿಗೆಗಳು, ದತ್ತಿಗಳು ಅಥವಾ ಇತರ ಅನುದಾನಗಳು;

(ಜಿ) ಶುಲ್ಕಗಳು ಮತ್ತು ಚಾರ್ಜುಗಳ ಮೂಲಕ ವಿದ್ಯಾಲಯವು ಪಡೆದ ಆದಾಯ; ಮತ್ತು

(ಹೆಚ್) ಇತರ ಯಾವುವೇ ಮೂಲಗಳಿಂದ ಸ್ವೀಕರಿಸಲಾದ ಮೊಬಲಗು.

(2) ಸದರಿ ನಿಧಿಯಲ್ಲಿರುವ ಮೊಬಲಗನ್ನು, ಭಾರತದ ರಿಸರ್ವ್ ಬ್ಯಾಂಕ್ ಅಧಿನಿಯಮ, 1934ರಲ್ಲಿ ಪರಿಭಾಷಿಸಲಾದಂತೆ ಒಂದು ಅನುಸೂಚಿತ ಬ್ಯಾಂಕಿನಲ್ಲಿ ಅಥವಾ ಬ್ಯಾಂಕಿಂಗ್ ಕಂಪನಿಗಳ (ಉದ್ಯಮಗಳ ಆರ್ಜನೆ ಮತ್ತು ವರ್ಗಾವಣೆ) ಅಧಿನಿಯಮ, 1970ರ ಮತ್ತು 1980ರ ಅಡಿಯಲ್ಲಿ ರಚಿತವಾದ ಒಂದು ಸಂವಾದಿ ಹೊಸ ಬ್ಯಾಂಕಿನಲ್ಲಿ ಇಡತಕ್ಕದ್ದು ಅಥವಾ ಕಾರ್ಯನಿರ್ವಾಹಕ ಪರಿಷತ್ತು ನಿರ್ಧರಿಸಬಹುದಾದಂತೆ ಭಾರತ ನ್ಯಾಸ ಅಧಿನಿಯಮ, 1982ರ ಮೂಲಕ ಅಧಿಕಾರ ನೀಡಲಾದಂಥ ಭದ್ರತೆಗಳಲ್ಲಿ ಹೂಡಬಹುದು.

(3) ಸದರಿ ನಿಧಿಯನ್ನು ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ವಿದ್ಯಾಲಯದ ಉದ್ದೇಶಕ್ಕಾಗಿ ಮತ್ತು ಅಂಥ ರೀತಿಯಲ್ಲಿ ತೊಡಗಿಸತಕ್ಕದ್ದು.

24. **ವಾರ್ಷಿಕ ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು ಕಾರ್ಯನಿರ್ವಾಹಕ ಪರಿಷತ್ತಿನ ನಿರ್ದೇಶನಗಳ ಅಡಿಯಲ್ಲಿ ಸಿದ್ಧಪಡಿಸತಕ್ಕದ್ದು.

(2) ವಿದ್ಯಾಲಯದ ಲೆಕ್ಕಪತ್ರಗಳನ್ನು, ಕನಿಷ್ಠ ವರ್ಷಕ್ಕೆ ಒಂದು ಸಲ, ಕಾರ್ಯನಿರ್ವಾಹಕ ಪರಿಷತ್ತಿನಿಂದ ನೇಮಕಗೊಂಡ ಲೆಕ್ಕಪರಿಶೋಧಕರು ಲೆಕ್ಕಪರಿಶೋಧನೆ ಮಾಡತಕ್ಕದ್ದು:

ಪರಂತು, ರಾಜ್ಯ ಸರ್ಕಾರ ಅಥವಾ ಭಾರತದ ಬಾರ್ ಕೌನ್ಸಿಲ್ ಟ್ರಸ್ಟ್ ಇವುಗಳು, ಅಗತ್ಯವೆಂದು ಪರಿಗಣಿಸಿದಾಗಲೆಲ್ಲ ವಿದ್ಯಾಲಯದ ಹಾಗೂ ಅದು ನಿರ್ವಹಿಸುತ್ತಿರುವ ಸಂಸ್ಥೆಗಳನ್ನು ಒಳಗೊಂಡು, ಅದು ನಿರ್ದಿಷ್ಟಪಡಿಸಬಹುದಾದಂಥ ಲೆಕ್ಕಪರಿಶೋಧಕರಿಂದ ಲೆಕ್ಕಪತ್ರಗಳ ಪರಿಶೋಧನೆ ನಡೆಸಲು ನಿರ್ದೇಶಿಸುವ ಅಧಿಕಾರವನ್ನು ಹೊಂದಿರತಕ್ಕದ್ದು.

(3) ಲೆಕ್ಕಪತ್ರಗಳ ಪರಿಶೋಧನೆಯನ್ನು ನಡೆಸಿದ ನಂತರ, ಅದನ್ನು ಕಾರ್ಯನಿರ್ವಾಹಕ ಪರಿಷತ್ತು ಪ್ರಕಟಿಸತಕ್ಕದ್ದು ಮತ್ತು ಲೆಕ್ಕಪರಿಶೋಧನಾ ವರದಿಯೊಂದಿಗೆ ಲೆಕ್ಕಪತ್ರಗಳ ಒಂದು ಪ್ರತಿಯನ್ನು ಕಾರ್ಯನಿರ್ವಾಹಕ ಪರಿಷತ್ತಿನ ಮುಂದೆ ಮಂಡಿಸತಕ್ಕದ್ದು ಮತ್ತು ರಾಜ್ಯ ಸರ್ಕಾರಕ್ಕೆ ಸಹ ಅದನ್ನು ಸಲ್ಲಿಸತಕ್ಕದ್ದು.

(4) ಸಾಮಾನ್ಯ ಪರಿಷತ್ತು ತನ್ನ ವಾರ್ಷಿಕ ಸಭೆಯಲ್ಲಿ ವಾರ್ಷಿಕ ಲೆಕ್ಕಪತ್ರಗಳನ್ನು ಪರಿಶೀಲಿಸತಕ್ಕದ್ದು. ಸಾಮಾನ್ಯ ಪರಿಷತ್ತು ಲೆಕ್ಕ ಪತ್ರಗಳಿಗೆ ಸಂಬಂಧಿಸಿದಂತೆ ನಿರ್ಣಯಗಳನ್ನು ಕೈಗೊಳ್ಳಬಹುದು ಮತ್ತು ಕಾರ್ಯನಿರ್ವಾಹಕ ಪರಿಷತ್ತಿಗೆ ಅದನ್ನು ತಿಳಿಸತಕ್ಕದ್ದು. ಕಾರ್ಯನಿರ್ವಾಹಕ ಪರಿಷತ್ತು, ಸಾಮಾನ್ಯ ಪರಿಷತ್ತು ಮಾಡಿದ ಸಲಹೆಗಳನ್ನು ಪರಿಗಣಿಸತಕ್ಕದ್ದು ಮತ್ತು ಆ ಬಗ್ಗೆ ಅದು ಸೂಕ್ತವೆಂದು ಆಲೋಚಿಸುವಂಥ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು. ಕಾರ್ಯನಿರ್ವಾಹಕ ಪರಿಷತ್ತು ಅದರ ಮುಂದಿನ ಸಭೆಯಲ್ಲಿ, ತಾನು ಕೈಗೊಂಡ ಎಲ್ಲ ಕ್ರಮಗಳ ಬಗ್ಗೆ ಅಥವಾ ಕ್ರಮ ಕೈಗೊಳ್ಳದಿರುವುದಕ್ಕೆ ಕಾರಣಗಳನ್ನು ಸಾಮಾನ್ಯ ಪರಿಷತ್ತಿಗೆ ತಿಳಿಸತಕ್ಕದ್ದು.

25. **ಹಣಕಾಸು ಅಂದಾಜುಗಳು.–** (1) ಕಾರ್ಯನಿರ್ವಾಹಕ ಪರಿಷತ್ತು ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ದಿನಾಂಕಕ್ಕಿಂತ ಮೊದಲು, ಮುಂಬರುವ ವರ್ಷದ ಹಣಕಾಸು ಅಂದಾಜುಗಳನ್ನು ಸಿದ್ಧಪಡಿಸತಕ್ಕದ್ದು ಮತ್ತು ಸಾಮಾನ್ಯ ಪರಿಷತ್ತಿನ ಮುಂದೆ ಅವುಗಳನ್ನು ಮಂಡಿಸತಕ್ಕದ್ದು.

(2) ಕಾರ್ಯನಿರ್ವಾಹಕ ಪರಿಷತ್ತು ಬಜೆಟಿನಲ್ಲಿ ಒದಗಿಸಲಾದ ಮೊಬಲಗಿಗಿಂತ ಹೆಚ್ಚಿನ ವೆಚ್ಚವನ್ನು ವಹಿಸಬೇಕಾಗಿರುವಲ್ಲಿ ಅಥವಾ ಜರೂರು ಸಂದರ್ಭದಲ್ಲಿ ಕಾರಣಗಳನ್ನು ಲಿಖಿತದಲ್ಲಿ ದಾಖಲಿಸಿ, ವಿನಿಯಮಗಳಲ್ಲಿ

ನಿರ್ದಿಷ್ಟಪಡಿಸಲಾದಂಥ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು ವೆಚ್ಚವನ್ನು ಭರಿಸತಕ್ಕದ್ದು. ಅಂಥ ಹೆಚ್ಚಿನ ವೆಚ್ಚದ ಸಂಬಂಧದಲ್ಲಿ ಬಜೆಟಿನಲ್ಲಿ ಯಾವುದೇ ಅವಕಾಶವನ್ನು ಕಲ್ಪಿಸಿರದಿದ್ದರೆ ಅದರ ಮುಂದಿನ ಸಭೆಯಲ್ಲಿ ಸಾಮಾನ್ಯ ಪರಿಷತ್ತಿಗೆ ಒಂದು ವರದಿಯನ್ನು ಸಲ್ಲಿಸತಕ್ಕದ್ದು.

26. **ವಾರ್ಷಿಕ ವರದಿ.–** ಸಾಮಾನ್ಯ ಪರಿಷತ್ತು ನಿರ್ದಿಷ್ಟಪಡಿಸಬಹುದಾದಂಥ ವಿವರಗಳನ್ನು ಒಳಗೊಂಡ ಹಾಗೂ ಪ್ರತಿ ಆರ್ಥಿಕ ವರ್ಷದ ವಿವರಗಳನ್ನೊಳಗೊಂಡ ವಾರ್ಷಿಕ ವರದಿಯನ್ನು ಕಾರ್ಯನಿರ್ವಾಹಕ ಪರಿಷತ್ತು ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ದಿನಾಂಕದಂದು ಅಥವಾ ಅದಕ್ಕಿಂತ ಮುಂಚಿತವಾಗಿ ಸಾಮಾನ್ಯ ಪರಿಷತ್ತಿಗೆ ಸಲ್ಲಿಸತಕ್ಕದ್ದು. ಸಾಮಾನ್ಯ ಪರಿಷತ್ತು ಅದರ ಮೇಲೆ ನಿರ್ಣಯಗಳನ್ನು ಹೊರಡಿಸಬಹುದು ಮತ್ತು ಕಾರ್ಯನಿರ್ವಾಹಕ ಪರಿಷತ್ತು, ತದನುಸಾರವಾಗಿ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು. ತೆಗೆದುಕೊಂಡ ಕ್ರಮದ ಬಗ್ಗೆ ಸಾಮಾನ್ಯ ಪರಿಷತ್ತಿಗೆ ತಿಳಿಸತಕ್ಕದ್ದು.

(2) ವಾರ್ಷಿಕ ವರದಿಯ ಪ್ರತಿಗಳನ್ನು, ಅದರ ಮೇಲೆ ಸಾಮಾನ್ಯ ಪರಿಷತ್ತಿನ ನಿರ್ಣಯಗಳೊಂದಿಗೆ, ರಾಜ್ಯ ಸರ್ಕಾರಕ್ಕೆ ಒಪ್ಪಿಸತಕ್ಕದ್ದು, ರಾಜ್ಯ ಸರ್ಕಾರವು ಅದನ್ನು ರಾಜ್ಯ ವಿಧಾನಮಂಡಲದ ಎರಡೂ ಸದನಗಳ ಮುಂದೆ, ಅದರ ಮುಂದಿನ ಅತಿ ಶೀಘ್ರ ಅಧಿವೇಶನದಲ್ಲಿ ಮಂಡಿಸತಕ್ಕದ್ದು.

27. **ಕರಾರುಗಳನ್ನು ಕಾರ್ಯಗತಗೊಳಿಸುವುದು.–** ವಿದ್ಯಾಲಯದ ವ್ಯವಸ್ಥಾಪನೆ ಮತ್ತು ಆಡಳಿತಕ್ಕೆ ಸಂಬಂಧಪಟ್ಟ ಎಲ್ಲ ಕರಾರುಗಳನ್ನು ಕಾರ್ಯನಿರ್ವಾಹಕ ಪರಿಷತ್ತು ರಚಿಸಿದಂತೆ ಅಭಿವ್ಯಕ್ತಿಗೊಳಿಸತಕ್ಕದ್ದು ಮತ್ತು ಕರಾರಿನ ಮೌಲ್ಯವು ಹತ್ತು ಲಕ್ಷ ರೂಪಾಯಿಗಳಿಗಿಂತ ಹೆಚ್ಚಿನದ್ದಾದರೆ [1][ಕುಲಪತಿ][1] ಯು ಮತ್ತು ಮೌಲ್ಯವು ಹತ್ತು ಲಕ್ಷ ರೂ. ಗಳನ್ನು ಮೀರದಿದ್ದರೆ ಕುಲಸಚಿವನು ಕಾರ್ಯಗತಗೊಳಿಸತಕ್ಕದ್ದು.

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

28. **ವಿದ್ಯಾರ್ಥಿಗಳ ಪ್ರವೇಶಕ್ಕೆ ಅರ್ಹತೆ.–** ಯಾರೇ ವಿದ್ಯಾರ್ಥಿಯು ವಿನಿಯಮಗಳ ಮೂಲಕ ನಿಯಮಿಸ ಬಹುದಾದಂಥ ಅರ್ಹತೆಗಳನ್ನು ಹೊಂದಿದ್ದ ಹೊರತು, ಪದವಿ ಅಥವಾ ಡಿಪ್ಲೋಮ ಅಧ್ಯಯನದ ವ್ಯಾಸಂಗ ಕ್ರಮಕ್ಕೆ ಪ್ರವೇಶ ಪಡೆಯಲು ಅರ್ಹನಾಗಿರತಕ್ಕದ್ದಲ್ಲ.

29. **ವಿದ್ಯಾರ್ಥಿಗಳ ವಾಸಸ್ಥಳ.–** ವಿದ್ಯಾಲಯದ ಪ್ರತಿಯೊಬ್ಬ ವಿದ್ಯಾರ್ಥಿಯು, ವಿದ್ಯಾಲಯವು ನಿರ್ವಹಿಸುತ್ತಿರುವ ಅಥವಾ ಮಾನ್ಯತೆ ನೀಡಿರುವ ವಿದ್ಯಾರ್ಥಿ ನಿಲಯದಲ್ಲಿ ಅಥವಾ ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಷರತ್ತುಗಳ ಮೇರೆಗೆ ವಾಸಿಸತಕ್ಕದ್ದು.

30. **ಗೌರವ ಪದವಿಗಳು.–** ಶೈಕ್ಷಣಿಕ ಪರಿಷತ್ತಿನ ಮೂರನೇ ಎರಡರಷ್ಟಕ್ಕಿಂತ ಕಡಿಮೆ ಇಲ್ಲದ ಸದಸ್ಯರು, ಯಾರೇ ವ್ಯಕ್ತಿಗೆ ಆತನ ಶ್ರೇಷ್ಠ ಸಾಧನೆ ಮತ್ತು ಸ್ಥಾನಮಾನದ ಕಾರಣದಿಂದಾಗಿ, ಅವರ ಅಭಿಪ್ರಾಯದಲ್ಲಿ ಗೌರವ ಪದವಿ ಅಥವಾ ಶೈಕ್ಷಣಿಕ ವೈಶಿಷ್ಟ್ಯತೆಯನ್ನು ಸ್ವೀಕರಿಸಲು ಯೋಗ್ಯ ಮತ್ತು ಸೂಕ್ತ ವ್ಯಕ್ತಿ ಎಂಬ ಆಧಾರದ ಮೇಲೆ ಆತನಿಗೆ ಗೌರವ ಪದವಿ ಅಥವಾ ಶೈಕ್ಷಣಿಕ ವೈಶಿಷ್ಟ್ಯತೆಯನ್ನು ಪ್ರದಾನ ಮಾಡಬೇಕೆಂದು ಶಿಫಾರಸು ಮಾಡಿದರೆ, ಸಾಮಾನ್ಯ ಪರಿಷತ್ತು, ಶಿಫಾರಸು ಮಾಡಿದ ವ್ಯಕ್ತಿಗೆ ಅದನ್ನು ಪ್ರದಾನ ಮಾಡಬಹುದೆಂದು ನಿರ್ಣಯದ ಮೂಲಕ ತೀರ್ಮಾನಿಸಬಹುದು.

31. **ಪದವಿ ಅಥವಾ ಡಿಪ್ಲೋಮವನ್ನು ಹಿಂತೆಗೆದುಕೊಳ್ಳುವುದು.–** (1) ನೈತಿಕ ಪತನವನ್ನು ಒಳಗೊಳ್ಳುವುದೆಂದು ಸಾಮಾನ್ಯ ಪರಿಷತ್ತು ಅಭಿಪ್ರಾಯಪಡುವ ಯಾವುದೇ ಅಪರಾಧಕ್ಕಾಗಿ ವ್ಯಕ್ತಿಯು ನ್ಯಾಯಾಲಯದಿಂದ ಅಪರಾಧಿಯೆಂದು ನಿರ್ಣೀತನಾಗಿದ್ದರೆ ಅಥವಾ ಅವನು ಅತೀವ ದುರ್ನಡತೆಯ ತಪ್ಪಿತಸ್ಥನಾಗಿದ್ದರೆ, ಸಾಮಾನ್ಯ ಪರಿಷತ್ತಿನ ಒಟ್ಟು ಸದಸ್ಯರ ಬಹುಮತದಿಂದ ಮತ್ತು ಸಭೆಯಲ್ಲಿ ಹಾಜರಿದ್ದು ಮತಚಲಾಯಿಸುವ ಸಾಮಾನ್ಯ ಪರಿಷತ್ತಿನ ಮೂರನೆಯ ಎರಡರಷ್ಟಕ್ಕಿಂತ ಕಡಿಮೆಯಿಲ್ಲದ ಸದಸ್ಯರ ಬಹುಮತದಿಂದ ಅಂಗೀಕೃತವಾದ ನಿರ್ಣಯದ ಮೂಲಕ, ಕಾರ್ಯನಿರ್ವಾಹಕ ಪರಿಷತ್ತಿನ ಶಿಫಾರಸಿನ ಮೇಲೆ, ಸಾಮಾನ್ಯ ಪರಿಷತ್ತು, ಯಾರೇ ವ್ಯಕ್ತಿಗೆ ಪ್ರದತ್ತವಾದ ಅಥವಾ ನೀಡಲಾದ ಯಾವುದೇ ವೈಶಿಷ್ಟತೆ, ಪದವಿ, ಡಿಪ್ಲೋಮಾ ಅಥವಾ ವಿಶೇಷಾಧಿಕಾರವನ್ನು ಹಿಂತೆಗೆದುಕೊಳ್ಳಬಹುದು.

(2) ಯಾರೇ ವ್ಯಕ್ತಿಯ ವಿರುದ್ಧವಾಗಿ, ಈ ಅಧಿನಿಯಮದ ಮೇರೆಗೆ ತೆಗೆದುಕೊಳ್ಳಲು ಪ್ರಸ್ತಾವಿಸಿದ ಯಾವುದೇ ಕ್ರಮದ ವಿರುದ್ಧ ಕಾರಣವನ್ನು ತೋರಿಸಲು ಆತನಿಗೆ ಒಂದು ಅವಕಾಶವನ್ನು ಕೊಟ್ಟ ಹೊರತು, ಯಾವುದೇ ಕ್ರಮ ಕೈಗೊಳ್ಳತಕ್ಕದ್ದಲ್ಲ.

(3) ಸಾಮಾನ್ಯ ಪರಿಷತ್ತು ಅಂಗೀಕರಿಸಿದ ನಿರ್ಣಯದ ಒಂದು ಪ್ರತಿಯನ್ನು ಸಂಬಂಧಪಟ್ಟ ವ್ಯಕ್ತಿಗೆ ತಕ್ಷಣವೇ ಕಳುಹಿಸತಕ್ಕದ್ದು.

(4) ಸಾಮಾನ್ಯ ಪರಿಷತ್ತು ತೆಗೆದುಕೊಂಡ ನಿರ್ಣಯದಿಂದ ಬಾಧಿತನಾದ ಯಾರೇ ವ್ಯಕ್ತಿಯು, ಅಂಥ ಠರಾವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳ ಒಳಗೆ [1][ಕುಲಾಧಿಪತಿ][1] ಗೆ ಅಪೀಲು ಮಾಡಿಕೊಳ್ಳಬಹುದು.

(5) ಅಂಥ ಅಪೀಲಿನ ಸಂದರ್ಭದಲ್ಲಿ [1][ಕುಲಾಧಿಪತಿ][1]ಯ ತೀರ್ಮಾನವು ಅಂತಿಮವಾಗಿರತಕ್ಕದ್ದು.

**32. ಶಿಸ್ತು.–** (1) ವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಶಿಸ್ತು ಪಾಲನೆಯ ಜವಾಬ್ದಾರಿಗೆ ಸಂಬಂಧಿಸಿದಂತೆ [1][ಕುಲಪತಿ][1] ಯು ಅಂತಿಮ ಪ್ರಾಧಿಕಾರಿಯಾಗಿರತಕ್ಕದ್ದು. ಈ ಸಂಬಂಧದಲ್ಲಿ ಆತನ ನಿರ್ದೇಶನಗಳನ್ನು ವಿದ್ಯಾಲಯದ ವಿದ್ಯಾರ್ಥಿನಿಲಯಗಳ ಮತ್ತು ಸಂಸ್ಥೆಗಳ ಮುಖ್ಯಸ್ಥರು ಪಾಲಿಸತಕ್ಕದ್ದು.

(2) (1)ನೇ ಉಪಖಂಡದಲ್ಲಿ ಏನೇ ಒಳಗೊಂಡಿದ್ದರೂ, [1][ಕುಲಪತಿ][1] ಯ ವರದಿಯ ಮೇಲೆ ಪರೀಕ್ಷೆಯಿಂದ ಒಬ್ಬ ವಿದ್ಯಾರ್ಥಿಯನ್ನು ನಿಷೇಧಿಸುವ ಅಥವಾ ವಿದ್ಯಾಲಯದಿಂದ ಅಥವಾ ವಿದ್ಯಾರ್ಥಿನಿಲಯದಿಂದ ಅಥವಾ ಸಂಸ್ಥೆಯಿಂದ ತಾತ್ಕಾಲಿಕವಾಗಿ ಹೊರದೂಡುವ ಶಿಕ್ಷೆಯನ್ನು ಕಾರ್ಯನಿರ್ವಾಹಕ ಪರಿಷತ್ತು ಪರ್ಯಾಲೋಚಿಸಿ ವಿಧಿಸತಕ್ಕದ್ದು:

1. 2004ರ ಅಧಿನಿಯಮ 15ರ ಮೂಲಕ 6.3.2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಸಂಬಂಧಪಟ್ಟ ವಿದ್ಯಾರ್ಥಿಗೆ, ಅವನ ವಿರುದ್ಧ ತೆಗೆದುಕೊಳ್ಳಲು ಉದ್ದೇಶಿಸಿದ ಕ್ರಮದ ವಿರುದ್ಧ ಕಾರಣವನ್ನು ತೋರಿಸಲು ಒಂದು ಯುಕ್ತ ಅವಕಾಶವನ್ನು ಕೊಟ್ಟ ಹೊರತು, ಅಂಥ ಯಾವುದೇ ಶಿಕ್ಷೆಯನ್ನು ವಿಧಿಸತಕ್ಕದ್ದಲ್ಲ.

**33. ಪುರಸ್ಕೃತ ಪರಿಯೋಜನೆಗಳು.–** ವಿದ್ಯಾಲಯದ ಮೂಲಕ ಕಾರ್ಯಗತಗೊಳಿಸುವುದಕ್ಕಾಗಿ ಒಂದು ಪರಿಯೋಜನೆಯನ್ನು ಪುರಸ್ಕರಿಸುವುದಕ್ಕಾಗಿ ಯಾವುದೇ ಸರ್ಕಾರದಿಂದ, ವಿಶ್ವವಿದ್ಯಾನಿಲಯ ಅನುದಾನ ಆಯೋಗದಿಂದ ಅಥವಾ ಇತರ ಏಜೆನ್ಸಿಗಳಿಂದ ವಿದ್ಯಾಲಯವು ನಿಧಿಯನ್ನು ಸ್ವೀಕರಿಸಿದಾಗಲೆಲ್ಲ, ಈ ಅಧಿನಿಯಮ ಮತ್ತು ವಿನಿಯಮಗಳಲ್ಲಿ ಏನೇ ಇದ್ದರೂ,–

(ಎ) ವಿದ್ಯಾಲಯವು ಸ್ವೀಕರಿಸಿದ ಮೊಬಲಗನ್ನು ವಿದ್ಯಾಲಯದ ನಿಧಿಯಿಂದ ಪ್ರತ್ಯೇಕವಾಗಿಡತಕ್ಕದ್ದು ಮತ್ತು ಪರಿಯೋಜನೆಯ ಉದ್ದೇಶಕ್ಕಾಗಿ ಮಾತ್ರ ಅದನ್ನು ಬಳಸಿಕೊಳ್ಳತಕ್ಕದ್ದು; ಮತ್ತು

(ಬಿ) ಪರಿಯೋಜನೆಯನ್ನು ಕಾರ್ಯಗತಗೊಳಿಸಲು ಅವಶ್ಯವಿರುವ ಸಿಬ್ಬಂದಿಯನ್ನು, ಪುರಸ್ಕರಿಸುವ ಸಂಸ್ಥೆಯು ಗೊತ್ತುಪಡಿಸುವ ನಿಬಂಧನೆಗಳು ಮತ್ತು ಷರತ್ತುಗಳಿಗನುಸಾರವಾಗಿ ಭರ್ತಿ ಮಾಡಿಕೊಳ್ಳತಕ್ಕದ್ದು.

The above translation of the National Law School of India Act, 1976 (Karnataka Act 76 of 1976) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

P.R. 339

**ಜಿ.ಕೆ. ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ,